Photo by J. V. S. Sastry



ಬಹುಮಾನ
ಪಡೆದ ಶೀರ್ಷಿಕೆ

ಮೌನ ಸಾಧಕ

ಕಳಿಸಿದವರು:
ಆಂಡಾಳ್, ಮೈಸೂರು

## ಈ ಸಂಚಿಕೆಯಲ್ಲಿ

ಹೆಸರು ಗಳಿಸಿದ ಚಂದಮಾಮ ಬಳಗದಲ್ಲಿ ಇನ್ನೊಂದು ಭಾಷೆ

# ચાંદામામા

## (ಗುಜರಾತೀ)

ಹೊರಬೀಳಲಿರುವುದೆಂದು ಪ್ರಕಟಿಸಲು ಕುತೂಹಲ ಪಡುತ್ತೇವೆ.

ವಾರ್ಷಿಕ ಚಂದಾ **4-8-0** ಬಿಡಿ ಸಂಚಿಕೆ **0-6-0**

**ಏಜನ್ಸೀ ಷರತುಗಳಿಗೆ ಬರೆಯಿರಿ**



ಚಂದಮಾಮ ಪಬ್ಲಿಕೇಷನ್ಸ್

ವಡಪಳನಿ :: ಮದರಾಸು - **26.**



## ಡೋಂಗರೇ ಬಾಲಾಮೃತ

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

## "ಚಂದಮಾಮ"ನಿಗೆ

## ಏಜಂಟರು ಬೇಕು



ಏಜಂಟರಿಲ್ಲದ ಕಡೆಗಳಲ್ಲಿ ಸಣ್ಣ ಸಣ್ಣ ಏಜಂಟರು ಬೇಕು. ನೀವು ಎಜಂಟರಾಗಿ ಸ್ವಲ್ಪ ಪ್ರತಿಗಳನ್ನು ಕೂಡಾ ತರಿಸಿಕೊಳ್ಳಬಹುದು. ಪ್ರತಿ ತಿಂಗಳೂ **2-0-0** ಕಳುಹಿಸುತ್ತಾ ಇದ್ದರೆ ನಿಮಗೆ **7** ಪ್ರತಿಗಳನ್ನು ಕಳುಹಿಸುತ್ತೇವೆ. ಈ ಪದ್ಧತಿಯಿಂದ ನಿಮಗೆ ಪ್ರತಿ ತಿಂಗಳೂ 0-10-0 ಲಾಭವಿರುತ್ತದೆ. ಪೂರ್ಣ ವಿವರಗಳಿಗೆ ಬರೆಯಿರಿ.

ಚಂದಮಾಮ ಪಬ್ಲಿಕೇಷನ್ಸ್

ವಡಪಳನಿ : ಮದ್ರಾಸು - 26

# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

ರಾಜನಾಗಬೇಕಾದವನಿಗೆ ಶೌರ್ಯ, ಧೈರ್ಯ, ಔದಾರ್ಯ, ಸಾಹಸ ಮೊದಲಾದ ಗುಣಗಳು ಬೇಕಾದುದೆಂದು ಎಲ್ಲರಿಗೂ ಗೊತ್ತಿದೆ. ಇವೆಲ್ಲಕ್ಕಿಂತಲೂ ಮೇಲಾಗಿರಬೇಕಾದುದು ಸಹನೆ. ಇದು ರಾಜನಿಗೆ ಮಾತ್ರವಲ್ಲ, ಎಲ್ಲ ಮಾನವರಿಗೂ ಇರಬೇಕಾದುದೇ. ರಾಜನಂತೂ ಪ್ರತ್ಯಕ್ಷ ದೇವರ ಹಾಗಿನವನಾದುದರಿಂದ, ದೇವತಾ ಗುಣವಾದ ಸಹನೆ ಅವನಿಗೆ ಅತ್ಯಾವಶ್ಯಕವಾಗಿರಬೇಕು. ಇಂತಹ ಸಹನೆಯ ಪರೀಕ್ಷೆಯಲ್ಲಿ ಉತ್ತೀರ್ಣನಾದ ಕವಿಯೊಬ್ಬನ ಕತೆಯೇ ರಾಜನೀತಿ. ಹೀಗೆಯೇ ಉಳಿದ ಕತೆಗಳಲ್ಲಿಯೂ ಒಂದೊಂದು ಮುಖ್ಯವಾದ ನೀತಿ ತತ್ವಗಳು ಅಡಗಿರುವುದನ್ನು ಗ್ರಹಿಸುವಿರಿತಾನೆ? ಹಾಗೆ ಗ್ರಹಿಸಿ ಈ ಸಂಚಿಕೆಯಲ್ಲಿರುವ ಪದ್ಯಗಳು ಕತೆಗಳು ಮೊದಲಾದುವುಗಳಲ್ಲಿ ನಿಮಗೆ ತುಂಬಾ ಮೆಚ್ಚುಗೆ ಯಾದುದು ಯಾವುದು, ಏಕೆ, ಎಂಬುದನ್ನು ನಮಗೆ ತಿಳಿಸುವಿರಾ?

ಸಂಪುಟ ೧೨ : ಮೇ ೧೯೫೪ : ಸಂಚಿಕೆ ೫







# ವಿಶ್ವಾಸೀ ಶುನಕ

ಒಂದೂರಿನಲಿಯೊಬ್ಬ ಗೊಲ್ಲನಿದ್ದ,
ಅವ-ನೊಂದು ನಾಯಿಯ ಸಾಕುತಿದ್ದ.
ಆ-ನಾಯ್‌ಮೇಲೆ ಬಲು ಪ್ರಿತಿಯಿಟ್ಟಿದ್ದ
ಅದಕೆ-ಬೇಕಾದ ಭಾಷೆಯ ಕಲಿಸಿದ್ದ.
ಒಮ್ಮೆ ಆ ಗೊಲ್ಲಗೆ ಹಣದ ಚಿಂತೆ,
ಬಂತು—ಎಷ್ಟು ಯೋಚಿಸೆ ತೀರದಂತೆ.
ಕಡೆಗೊಂದು ದಾರಿಯ ನೋಡಿಕೊಂಡು,
ಬೇಗ—ನಡೆದನು ಧನಶೆಟ್ಟಿ ಬಳಿಗಂದು.
'ಏನು ಬಂದಿಯೊ?' ಎಂದು ಕೇಳಲವ,
ಗೊಲ್ಲ—ನಡಿದ ತನ್ನಯ ಬನ್ನವೆಲ್ಲವ.
ಅದಕೇಳಿ ತಲೆದೂಗಿ ಧನಶೆಟ್ಟಿ
ಎಂದ—'ಹಣಕೆ ಜಾಮೀನೇನು ಹೇಳ್‌ಗಟ್ಟಿ'
ಗೊಲ್ಲ ತನ್ನೊಡನೆ ಬಂದಾ ನಾಯ,
ತೋರಿ—'ಇದುನೋಡಿರೀ ಒಳ್ಳೆನಾಯ,
ಇದ ನಿಟ್ಟುಕೊಂಡು ಮಾಡಿ ಸಹಾಯ
ನಾನು—ಹಣತಂದು ಕರಕೊಂಬೆನೀನಾಯ.'
ಒಪ್ಪಿಕೊಂಡಾ ಶೆಟ್ಟಿ ಹಣಕೊಟ್ಟ.
ಗೊಲ್ಲ—ನಪ್ಪಿನಾಯಿಯ ತಂಬಾ ಮುದ್ದಿಟ್ಟ.
'ಶೆಟ್ಟಿ ಸೇವೆಯಮಾಡುತಿರು' ಯೆಂದು
ಹೇಳಿ—ಬಿಟ್ಟು ನಡೆದ ಗೊಲ್ಲನಂದು.
ಆ ನಾಯಿ ಗೊಲ್ಲನ ಉಪದೇಶವ
ಕೇಳಿ—ಕಾಯ್ತಿತ್ತು ಧನಶೆಟ್ಟಿ ಗೃಹವ
ಹೀಗಿರ ಲೊಂದಿನ ಕಳ್ಳರು
ರಾತ್ರಿ—ಧನಶೆಟ್ಟಿ ಮನೆಯ ನುಗ್ಗಿದರು.

“ಮಾರಂಗ”

ಕಾವಲುಕಾಯುವ ಧೀರ ನಾಯಿ
ತನ್ನ—ಜೀವದಾಶೆಯಬಿಟ್ಟು ತೆರೆದುಬಾಯಿ
ಹಾರಿ ಬೊಗಳಿಕಚ್ಚಿ ಕಳ್ಳರ,
ಅಟ್ಟಿ—ಗೆದ್ದಿತು ಆ ಶ್ವಾನ ಪ್ರವರ!
ನಾಯ ತುಂಬಾ ಮೆಚ್ಚಿ ಧನಶೆಟ್ಟಿ,
ಅದ—ಮುದ್ದಿಸಿ ಹೊಗಳಿದ ಮೈತಟ್ಟಿ.
‘ನನ್ನ—ಧನಪ್ರಾಣ ವುಳಿಸಿದ ಶುನಕಪ್ಪಾ,
ನಿನ್ನ—ಒಡೆಯನ ಋಣ ಹರಿಸಿದೆಯಪ್ಪ!
ನಿನ್ನುಪಕಾರಕ್ಕೆ ಲಕ್ಷ ಬೆಲೆ!
ಇನ್ನು—ಗೊಲ್ಲನ ಋಣವೆಲ್ಲ ತೀರಿತಲ್ಲೆ!’
ಎಂದು ನಡೆದುದೆಲ್ಲ ಲಿಖಿಸಿದಾ
ಚೀಟಿ—ನಾಯಕಂಠಕೆ ಕಟ್ಟಿ ಕಳಿಸಿದ.
ಓಡಿಬರುವ ತನ್ನ ನಾಯಕಂಡು,
ಗೊಲ್ಲ—ದ್ರೋಹಬಗೆಯಿತೆಂದುಕೊಂಡು,
ಕೋಪದಿಕೈಹಾಕಿ ದಂಟೆಗೆ,
ಏಟು—ಕೊಟ್ಟನಾ ಸಾಧುನಾಯ್ ಮಂಡೆಗೆ!
‘ಅಯ್ಯಯ್ಯೊ! ಕುಂಯ್ಯೊಯ್ಯೊ!’ ಕೂಗುತ,
ಬಿದ್ದು—ಒಡೆಯನ ನೋಡಿ ಕಣ್‌ಬಿಡುತ
ಪ್ರಾಣವ ನೀಗಿತಾಶ್ವಾನವು!
ಕೊರಳ—ಚೀಟಿಕಾಣಲ್ ಬಂತು ಜ್ಞಾನವು!!
ಎದೆಯೆದೆ ಬಡಕೊಂಡು ಗೊಲ್ಲನತ್ತ.
ಕೇಳಿ—ಶೆಟ್ಟಿಯೂ ಬಂದು ಗೋಳಿಟ್ಟತ್ತ.
ಮತ್ತೆ ಕಟ್ಟಿದರೊಂದು ಸ್ಮಾರಕ,
ಹೆಸರು—ಕೆತ್ತಿದರ್ ‘ವಿಶ್ವಾಸೀ ಶುನಕ’





# ಮು ಖ ಚಿ ತ್ರ

ದುರ್ಯೋಧನನ ಕಪಟದ್ಯೂತದಲ್ಲಿ ಸೋತು, ಧರ್ಮರಾಯನೇ ಮೊದಲಾದ ಪಂಚ ಪಾಂಡವರು ದ್ರೌಪದಿಯೊಂದಿಗೆ ಅರಣ್ಯವಾಸಕ್ಕೆ ಹೊರಟರಷ್ಟೆ? ಅವರು ಮೊದಲು ನಗರಗಳಿಗೆ ಸಮೀಪವಾದ ದ್ವೈತವನದಲ್ಲಿದ್ದರು. ಅಲ್ಲಿ ದುರ್ಯೋಧನನ ಕಾಟವು ಮಿತಿಮೀರಲು ಅಲ್ಲಿಂದ ಹೊರಟು ಬಹುದೂರದ ಕಾಮ್ಯಕವನವನ್ನು ಸೇರಿದರು.

ಎಷ್ಟೋ ತಾಳ್ಮೆಯಿಂದ ವನವಾಸ, ಅಜ್ಞಾತವಾಸಗಳನ್ನು ಮುಗಿಸಿದರೂ ದುರ್ಯೊಧನನು ಮತ್ತು ಏನಾದರೂ ಮೊಂಡುವಾದ ಮಾಡುವನೆಂದು ಅವರು ಯೋಚಿಸಿದರು. ಆಗ ಮಹಾ ಯುದ್ಧವಾದೀತೆಂದೂ ತರ್ಕಿಸಿದರು. ಅದಕ್ಕಾಗಿ ಶಿವನನ್ನೊಲಿಸಿ ದಿವ್ಯಾಸ್ತ್ರಗಳನ್ನು ಪಡೆಯಲು ಅರ್ಜುನನು ತಪಸ್ಸಿಗೆ ತೆರಳಿದನು.

ಇಂದ್ರಕೀಲವೆಂಬ ಪರ್ವತವನ್ನು ಸೇರಿ ಅರ್ಜುನನು ಶಿವನನ್ನು ಕುರಿತು ಕಠಿನ ವಾದ ತಪಸ್ಸನ್ನು ಮಾಡಿದನು. ಶಿವಪಾರ್ವತಿಯರು ಬೇಡ—ಬೇಡತಿಯರ ವೇಷ ದಿಂದ, ಹಾಗೆಯೇ ಮಾರುವೇಷದ ತಮ್ಮ ಪರಿವಾರದೊಂದಿಗೆ ಸುತ್ತಾಡುತ್ತಾ ಅರ್ಜುನನ ತಪಸ್ಸನ್ನು ಪರೀಕ್ಷಿಸುತ್ತಿದ್ದರು.

ಒಂದು ದಿನ ಮೂಕನೆಂಬ ರಾಕ್ಷಸನು ಭೀಕರ ಹಂದಿಯ ರೂಪದಿಂದ ಅರ್ಜುನನನ್ನು ಕೊಲ್ಲಲು ಬಂದನು. ಆಗ ಅರ್ಜುನನು ಒಂದೇ ಬಾಣದಿಂದ ಆ ಹಂದಿ ಯನ್ನು ಕೊಂದನು. ಅದೇ ಸಮಯದಲ್ಲಿ ಶಿವಬೇಡನೂ ಆ ಹಂದಿಯ ಮೇಲೆ ಬಾಣ ಬಿಟ್ಟಿದ್ದ. ಇಬ್ಬರ ಬಾಣಗಳೂ ಒಂದೇ ಸಮಯದಲ್ಲಿ ಆ ಹಂದಿಯನ್ನು ತಾಗಿದ್ದುವು.

ಆದುದರಿಂದ ಆ ಹಂದಿಯನ್ನು ನಾನು ಕೊಂದೆ, ತಾನು ಕೊಂದೆನೆಂದು ಅರ್ಜುನನಿಗೂ ಬೇಡನಿಗೂ ವಾಗ್ವಾದವಾಗಿ, ಘನಘೋರ ಯುದ್ಧವೇ ಜರುಗಿತು.

ಶಿವಾರ್ಜುನರ ಯುದ್ಧವೆಂದರೆ ಸಾಮಾನ್ಯವಾದುದೇ? ಒಬ್ಬರಮೇಲೊಬ್ಬರು ಬಾಣಗಳ ಮಳೆಯನ್ನೇ ಕರೆದರು. ಇಬ್ಬರ ಬಾಣಗಳೂ ನಡುದಾರಿಯಲ್ಲಿಯೇ ಮುಗ್ಗರಿಸಿ ಬಿದ್ದುವು. ಇಂತಹ ವಿಚಿತ್ರ ಇದಿರಾಳಿಯನ್ನು ನೋಡಿ ಅರ್ಜುನನಿಗಾದ ಆಶ್ಚರ್ಯಕ್ಕೆ ಮೇರೆಯಿರಲಿಲ್ಲ. ಕಡೆಗೆ ಅರ್ಜುನನ ಅಜೇಯವಾದ ಗಾಂಡೀವದ ನಾಣು ಹರಿಯುತ್ತಲೇ, ಅರ್ಜುನನು ಬೆರಗಾಗಿ ಶಿವನನ್ನೇ ಸ್ತುತಿಸಿ ಪೂಜಿಸಿದನು. ಆಗ ಬೇಡನೇ ಪರಮಶಿವನೆಂಬ ಸತ್ಯವು ಅರ್ಜುನನಿಗೆ ಗೊತ್ತಾಯಿತು.

ಪರಶಿವನು ಅರ್ಜುನನ ತಪಸ್ಸಿಗೆ ತುಂಬಾ ಮೆಚ್ಚಿ, ದಿವ್ಯದರ್ಶನವಿತ್ತನು. ಮತ್ತು ಅರ್ಜುನನ ಉದ್ದೇಶವು ಸಫಲವಾಗುವಂತೆ ಆಶೀರ್ವದಿಸಿ, ಮಹಾ ಶಕ್ತಿ ಯುತವಾದ ತನ್ನ ಪಾಶುಪತಾಸ್ತ್ರವನ್ನು ಅರ್ಜುನನಿಗೆ ಅನುಗ್ರಹಿಸಿದನು.




ಬುರುಡೇ ವಾದ್ಯದ ಕಥನದ ಮೇಳ
ಬೋರನ ಹಳ್ಳಿಗೆ ಬಂದಿತ್ತು. ಜನ-
ಗುಂಪುಗುಂಪಾಗಿ ಕೂಡಿತ್ತು. ಗ್ಯಾಸ್-
ಲೈಟಿನ ಚಪ್ಪರ ಹಾಕಿತ್ತು.
ಆ-ಸ್ಟೇಜಿನಮೇಲೆ ಲಾವಣಿಗಾರ
ರಾಗದಿ ಪುರಾಣ ಪಾಡುತ್ತ, ಆ-
ರಾಗಕೆ ಬುರುಡೆಯ ಮೀಂಟುತ್ತ, ಹಿಂ-
ಗಾಯಕಿ ತಂದನತಾನೆನುತ, ತ-
ಪ್ಪಾಗದೆ ತಾಳವ ಬಾರಿಸುತ.
ಹೀ-ಗೆತ್ತಿ ಕೊಡುವ ಹಿಮ್ಮೇಳಕೆ ಕಥಿಕ
ಒತ್ತಿ ಮೈಮರೆತು ಮೀಂಟಿದ ಬುರುಡೆ.
ಸುತ್ತಿತು ಪ್ರೇಕ್ಷಕರಾ ತಲೆಬುರುಡೆ.
ಅತ್ತಿಂದತ್ತ-ಇತ್ತಿಂದತ್ತ

ಧಿತ್ತೊಂಧೀಂಗಣ ರೀಂಗಣ ಹಾಕುತ
ಕುಕ್ಕುಣಿಗುಣಿಯುತ ಸಾಗಿತು ಕಥನ.
ಮೇಳದ ಜನವೂ ಪ್ರೇಕ್ಷಕ ಗಣವೂ
ಕಥೆಯ ಗುಂಗಿನಲಿ ಮುಳುಗಿದರು.
ಕೆಪ್ಪ ಕಿಟ್ಟನೂ ನೋಡಿದ ನೋಡಿದ,
ಏನೀ ಹುಚ್ಚೆಂದರಿಯದೆ ಚೀರಿದ,
ಬಾಳೆ ಹಣ್ಣುಗಳ ನುಂಗಿದ ನುಂಗಿದ
ಸಿಪ್ಪೆಯ ಮೇಳದ ಮುಂದೇ ಎಸೆದ.
ಬುರುಡೇ ವಾದ್ಯದ ಪುರಾಣಗಾರ
ಜರ್‍ರನೆಜಾರಿ ಬಿದ್ಬಿಟ್ಟ!
ತಾನತಂದಾನ ತಾನದೊಂದಿಗೆ
ಏನಾಯ್ತೆಂದೇ ಅರಿಯದಲೇ ಜನ-
ರೆಂದರು-"ಕಥೆಯಾವೇಶದಲೇ-ಅವ
ಬಿದ್ದನು ಅಹಹಾ! ಭಲೇ! ಭಲೇ!"

"ಸುಂದರಿ"



# ರಾಜನೀತಿ

ವಿಕ್ರಮಾದಿತ್ಯನು ಪಂಡಿತೋತ್ತಮನು ಮಾತ್ರವೇ ಅಲ್ಲ, ದಾನಶೀಲನೂ, ಮತ್ತು ಪಂಡಿತಪೋಷಕನೂ ಎಂಬ ವಿಷಯ ಆತನಿಗೆ ತಿಳಿದುಬಂತು. ಆ ವಿಷಯ ತಿಳಿದಕೂಡಲೇ ಆತನು ಉಜ್ಜಯಿನಿ ನಗರಕ್ಕೆ ಹೊರಟನು.

ಮಾತೃಗುಪ್ತನು ಒಂದುದಿನ ರಾಜಸಭೆಗೆ ಬಂದನು. ಪಂಡಿತರು ಯಾರೇ ಆಗಲೀ ಪ್ರಭುಗಳ ಮುಂದೆ ಕೈ ಚಾಚಬೇಕಾಗಿಲ್ಲ ವೆಂತಲೂ, ಖುದ್ದಾಗಿ ಮಹಾರಾಜರೇ ಆ ಪಂಡಿತರ ಯೋಗ್ಯತೆಯನ್ನು ಅರಿತು, ಉಚಿತ ಸತ್ಕಾರಗಳನ್ನು ಮಾಡಿ ಕಳುಹಿಸಿಕೊಡುವ ರೆಂಬ ವಿಷಯವೂ ಮಾತೃಗುಪ್ತನಿಗೆ ತಿಳಿದಿತ್ತು. ಈ ರಹಸ್ಯವರಿತಿದ್ದ ಗುಪ್ತನು ರಾಜನ ಮುಂದೆ ಹೋಗಿ ಏನೊಂದೂ ಬೇಡಿಕೊಳ್ಳಲಿಲ್ಲ. ಸಭೆಯಲ್ಲಿ ಆಸೀನರಾಗಿದ್ದ ಪಂಡಿತಗಣದೊಂದಿಗಾದರೂ ಹೋಗಿ ಕುಳಿತುಕೊಳ್ಳಲಿಲ್ಲ ಆತ. ತನ್ನನ್ನು ಯಾವ ರೀತಿ ಪರೀಕ್ಷಿಸಿ ತನ್ನ ಶಕ್ತಿಸಾಮರ್ಥ್ಯಗಳನ್ನು ವಿಕ್ರಮಾದಿತ್ಯನು ತಿಳಿಯುವನು ಎಂಬುದೇ ಗುಪ್ತನಿಗೆ ಆಲೋಚನೆಯಾಗಿತ್ತು. ಹಾಗೆ ಅವನು ನಿಂತಿರುವಾಗ ಮಹಾರಾಜನು ಬಂದ. ಮಾತೃಗುಪ್ತನನ್ನು ನೋಡಿದ. ನೋಡಿದ ತಕ್ಷಣ 'ಈತನು ಕೇವಲ ಕವಿಯಷ್ಟೇ ಅಲ್ಲ, ಗುಣವಂತನೂ ಹೌದು. ಈತನಲ್ಲಿ ಮೆಚ್ಚಿಕೊಳ್ಳುವಂತಹ ಗಾಂಭೀರ್ಯವೂ ಎದ್ದು ಕಾಣುತ್ತಿದೆ' ಎಂದು ಮನಸಿನಲ್ಲಿ ಅಂದುಕೊಂಡು, ಆತನನ್ನು ಪರೀಕ್ಷಿಸಬೇಕೆಂದು ನಿರ್ಧರಿಸಿದ. ಈ ನಿರ್ಧಾರದಿಂದ ಆತನಿಗೆ ಆಶ್ರಯವನ್ನು ಮಾತ್ರ ಕಲ್ಪಿಸಿದನೇ ಹೊರತು ಯಾವುದೇ ವಿಧವಾದ ಸತ್ಕಾರವನ್ನು ಮಾಡಲಿಲ್ಲ.

ಮಾತೃಗುಪ್ತನು ರಾಜಭವನದಲ್ಲಿದ್ದುಕೊಂಡು. ರಾಜನನ್ನು ಯಾವ ರೀತಿ ಮೆಚ್ಚಿಸಲಿ ಎಂದು ಯೋಚಿಸುತ್ತಿದ್ದ. ಆತನ ರೀತಿ ನೀತಿ ನೋಡಿ ಈತನೊಬ್ಬ ಹುಚ್ಚುಹಾರುವನೆಂದು ಆ ಭವನದಲ್ಲಿದ್ದವರಲ್ಲಿ ಅನೇಕರು ಅಭಿಪ್ರಾಯಪಟ್ಟರು. ವಿದೂಷಕರು ಆತನನ್ನು ಪರಿಹಾಸ ಮಾಡುತ್ತಿದ್ದರು. ದ್ವಾರಪಾಲಕರು ದ್ವೇಷಿಸುತ್ತಿದ್ದರು. ಆದರೂ ಆತನು ಇವುಗಳ

ಸಿ. ಕೃಷ್ಣರಾಯ, ಬೆಂಗಳೂರು

ಕಡೆ ಗಮನಕೊಡುತ್ತಿರಲಿಲ್ಲ. ಆತನು ಸದಾ ಯೋಚನಾಮಗ್ನನಾಗಿದ್ದನೇ ಹೊರತು ಕಣ್ಣೆತ್ತಿ ಸಹಾ ಯಾರನ್ನೂ ನೋಡುತ್ತಿರಲಿಲ್ಲ. ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ತನ್ನ ಪಾಂಡಿತ್ಯವನ್ನು ರಾಜನಮುಂದೆ ಹೇಗೆ ತೋರಿಸಲಿ ಎಂಬುದೊಂದೇ ಆತನ ತಾಪತ್ರಯ. ಈ ರೀತಿಯಾಗಿ ಒಂದು ವರ್ಷ ಕಳೆಯಿತು.

ಒಂದು ದಿನ ವಿಕ್ರಮಾದಿತ್ಯನು ಎಲ್ಲಿಗೋ ಹೋಗುತ್ತಿರುವಾಗ ಆತನಿಗೆ ಮಾತೃಗುಪ್ತನು ಎದುರುಬಿದ್ದ. ಗುಪ್ತನು ತುಂಬಾ ಬಡಕಲಾಗಿದ್ದ. ಶರೀರವೆಲ್ಲಾ ಮಲಿನವಾಗಿತ್ತು. ಉಟ್ಟಬಟ್ಟೆ ಕೊಳಕಾಗಿತ್ತು. 'ಪರದೇಶಿಯಾದ ಈ ಪಂಡಿತನು ಇಲ್ಲಿ ಸಹಾಯಹೀನನಾಗಿ ಇರುವನೆಂದು ತಿಳಿದೂ ಸಹ ತುಂಬು ಒಂದು ವರ್ಷ ಆತನಿಗೆ ಕಷ್ಟಕೊಟ್ಟೆ. ಇನ್ನು ತಡಮಾಡುವುದು ಉಚಿತವಲ್ಲ' ಎಂದು ಅಂದುಕೊಂಡ ಮಾಹಾರಾಜ. ಆದರೆ ಇಂತಹ ಗುಣಶೀಲನನ್ನೂ, ಪ್ರತಿಭಾಶಾಲಿಯನ್ನೂ ಹೇಗೆ ಸತ್ಕರಿಸಬೇಕೋ ಆತನಿಗೆ ಹೊಳೆಯಲಿಲ್ಲ. ಆದುದರಿಂದ ಆತನು ತನ್ನ ದಾರಿ ಹಿಡಿದ.

ಅದು ಚಳಿಗಾಲ. ಅಸಾಧ್ಯವಾದ ಚಳಿ. ಒಂದು ದಿನ ಅರ್ಧರಾತ್ರಿ ವೇಳೆಯಲ್ಲಿ ಮಹಾರಾಜನಿಗೆ ಎಚ್ಚರವಾಯಿತು. ಕೋಣೆಯಲ್ಲಿ ದೀಪಗಳು ಉರಿಯುತ್ತಿದ್ದವು. ಆ ಕೋಣೆ ಬೆಚ್ಚಗಿರಲು ಅಗ್ಗಿಷ್ಟಿಕೆಯನ್ನಿಟ್ಟಿರುವುದು ಕಾಣಿಸುತ್ತಿದೆ. ಕೋಣೆಯೊಳಕ್ಕೆ ಬೀಸುತ್ತಿರುವ ಚಳಿಗಾಳಿಗೆ ದೀಪಗಳು ರಪರಪನೆ




ಬಡಿದುಕೊಳುತ್ತಿದೆ. 'ಯಾರಲ್ಲಿ?' ಎಂದು ಕೂಗಿದ ಪ್ರಭು. ಉತ್ತರವಿಲ್ಲ. ಪಹರೆಯವರೆಲ್ಲಾ ಸುಖನಿದ್ರೆಯಲ್ಲಿದ್ದಾರೆ.

"ಮಹಾರಾಜ, ನಾನಿದ್ದೇನೆ, ಮಾತೃಗುಪ್ತ" ಎಂಬ ಕಂಠಸ್ವರ ಕೇಳಿಸಿತು. ಆತನು ಒಳಗೆ ಹೋಗಿ ಆರಿಹೋಗುತ್ತಿರುವ ದೀಪಗಳನ್ನು ದೊಡ್ಡದು ಮಾಡಿ, "ಏನಪ್ಪಣೆ ಪ್ರಭು" ಎಂದ. ಗುಪ್ತನು ಚಳಿಗೆ ಗಡಗಡ ನಡುಗುತ್ತಿದ್ದ. ಅಷ್ಟೇ ಅಲ್ಲದೆ ಆ ಅವೇಳೆಯಲ್ಲಿ ಮಹಾರಾಜನು ಕೂಗಲು ಧೃತಿಗೆಟ್ಟು ಮತ್ತಷ್ಟು ಕಂಪಿಸುತ್ತಿದ್ದ.

"ರಾತ್ರಿ ಕಳೆಯಲು ಇನ್ನೆಷ್ಟು ಸಮಯವಿದೇ?" ಎಂದು ಕೇಳಿದ ರಾಜ. 'ಪ್ರಭೂ, ಇನ್ನು ಒಂದೂವರೆ ಜಾಮವಿದೆ' ಎಂದ ಗುಪ್ತ.




"ವ್ಹಾ, ಸರಿಯಾಗಿ ಸಮಯ ಹೇಳಿದೆಯಲ್ಲಾ, ನಿನಗೆ ರಾತ್ರಿಹೊತ್ತು ನಿದ್ರೆ ಬರುತ್ತಿಲ್ಲವೇನು ?" ಎಂದು ಕೇಳಿದ ರಾಜ.

ಇದಕ್ಕೆ ಸಮಾಧಾನವಾಗಿ ಮಾತೃಗುಪ್ತನು ಒಂದು ಶ್ಲೋಕವನ್ನು ರಚಿಸಿ ಹೇಳಿದ. ಆ ಶ್ಲೋಕದ ಭಾವ ಹೀಗಿತ್ತು :

"ಮಹಾರಾಜನೇ ವಿಚಾರಸಾಗರದಲ್ಲಿ ಮುಳುಗಿರುವೆನು. ಚಳಿಗಾಳಿ ಥರಥರ ನಡುಗಿಸುತ್ತಿದೆ. ಹೊದ್ದುಕೊಳ್ಳಲು ಬಟ್ಟೆಯಿಲ್ಲದೆ, ಅಗ್ನಿಯನ್ನು ಪ್ರಜ್ವಲಗೊಳಿಸಿ ಕುಳಿತಿರುವೆನು. ಆದರೆ ನನ್ನ ದುರಾದೃಷ್ಟದಿಂದ ಅದೂ ಸಹ ಈಗಲೋ ಆಗಲೋ ಆರಿಹೋಗುವಂತಿದೆ. ಊದಲಾರದೆ ತುಟಿಗಳು ಒಣಗುತ್ತಿದೆ. ಹಸಿವು ಬಾಯಾರಿಕೆಗಳಿಂದ ಗಂಟಲು ಒಣಗಿ, ಕೆನ್ನೆಗಳು ಬತ್ತಿಹೋಗಿವೆ. ನನ್ನಮೇಲಿನ ಅಭಿಮಾನದಿಂದ ನಿದ್ರಾದೇವಿ ನನ್ನನ್ನು ತೊರೆದರೂ ನಿಶಾದೇವಿಮಾತ್ರ ಹಾಗೇ ಸ್ಥಿರವಾಗಿ ನಿಶ್ಚಲವಾಗಿರುವಳು."

ಗುಪ್ತನ ಶ್ಲೋಕವನ್ನು ಕೇಳಿ ಆನಂದ ತುಂದಿಲನಾದ ಮಹಾರಾಜ. ಸ್ವಗ್ರಾಮಕ್ಕೆ ಹೋಗಲು ಗುಪ್ತನಿಗೆ ಅನುಮತಿ ಇತ್ತ. ಹೋಗುವ ಮೊದಲು ಒಂದುಬಾರಿ ತನ್ನನ್ನು ಆಸ್ಥಾನದಲ್ಲಿ ನೋಡಬೇಕೆಂದು ಆಜ್ಞೆಮಾಡಿದ.

ಮಾತೃಗುಪ್ತನು ರಾಜನೊಂದಿಗೆ ಮಾತನಾಡಿಕೊಂಡು ಬಂದು, ತನ್ನ ದುರದೃಷ್ಟವನ್ನು ಹಳಿದುಕೊಂಡ. 'ಮಹಾರಾಜರು ನನ್ನ ಸಹಾಯಹೀನತೆಯನ್ನು ತಿಳಿದೂ ಸಹ ಅದನ್ನು ತೊಲಗಿಸಲು ಯಾವುದೇ ವಿಧವಾದ ವ್ಯವಸ್ಥೆ ಮಾಡಿದಂತೆ ಕಾಣಿಸಲಿಲ್ಲ. ಏನೋ ಉಪಕಾರ ಮಾಡುವರೆಂಬ ಅಭಿಪ್ರಾಯ ಇಟ್ಟುಕೊಳ್ಳುವುದೂ ಸಹ ವ್ಯರ್ಥ. ಇಲ್ಲಿಗೆ ಬಂದು ವರ್ಷವಾಯಿತು. ಧೈರ್ಯ ಸಡಲಿತು. ಆಶೆಗಳೆಲ್ಲವೂ ಉಡುಗಿದವು' ಎಂದೆಂದುಕೊಂಡು ಆ ಮಾರನೇಯ ದಿನ ಬೆಳಗ್ಗೆ ವಿಕ್ರಮಾದಿತ್ಯನ ಆಶ್ರಯವನ್ನು ಬಿಟ್ಟು ಹೊರಡಲು ಗುಪ್ತನು ತೀರ್ಮಾನಿಸಿದನು. ಮಾರನೇಯ ದಿನ ಬೆಳಗ್ಗೆ ನಿರಾಶೆಯಿಂದಲೂ, ನಿಸ್ಪೃಹತೆಯಿಂದಲೂ ಕುಗ್ಗಿ, ಉದಾಸೀನನಾಗಿ ಬಂದು ಪ್ರಭುಗಳಿಗೆ ನಮಸ್ಕಾರ ಮಾಡಿದ. ಪ್ರಭು ಆತನ ನಮಸ್ಕಾರವನ್ನು ಸ್ವೀಕರಿಸಿ, ಆಜ್ಞಾಪತ್ರಗಳನ್ನು ಬರೆಯುವ






ಉದ್ಯೋಗಿಗೆ ಸಂಜ್ಞೆಮಾಡಿದ. ಆ ಅಧಿಕಾರಿ ಒಂದು ಲಕೋಟೆಯನ್ನು ಮಾತೃಗುಪ್ತನಿಗೆ ಕೊಟ್ಟು, "ಕವಿವರ್ಯರೇ, ತೊಂದರೆ ಎಂದು ಭಾವಿಸದೆ ನೀವು ಈ ಆಜ್ಞಾಪತ್ರವನ್ನು ತೆಗೆದುಕೊಂಡು ಹೋಗಿ ಕಾಶ್ಮೀರದೇಶದ ಪ್ರಧಾನಮಂತ್ರಿಗಳಿಗೆ ಕೊಡೋಣವಾಗಲಿ. ಇದು ಬಹಳ ರಹಸ್ಯವಾದ ಪತ್ರ. ಯಾರ ಕೈಗೂ ಸಿಗದಂತೆ ಜಾಗರೂಕತೆಯಿಂದ ಕಾಪಾಡಿಕೊಂಡು ಹೋಗಿ ಇದನ್ನು ಮುಖ್ಯ ಮಂತ್ರಿಗಳಿಗೇ ಮುಟ್ಟಿಸಬೇಕು. ಜಾಗ್ರತೆ. ಇದು ಮಹಾರಾಜರ ಆಜ್ಞೆ" ಎಂದನು.

ಕವಿ ಅಪ್ಪಣೆ ಪಡೆದು ಅಲ್ಲಿಂದ ಹೊರಟ. ಈಗ ಆತನ ವೇದನೆ ಮತ್ತಷ್ಟು ಹೆಚ್ಚಾಯಿತು. ರಾಜನನ್ನು ಆಶ್ರಯಿಸಿದ ಫಲವಾಗಿ ಯಾವುದೇ ವಿಧವಾದ ಪ್ರೋತ್ಸಾಹ ಲಭಿಸುವುದು ಹಾಗಿರಲಿ, ಈಗ ತನ್ನನ್ನು ಒಬ್ಬ ಸಾಮಾನ್ಯ ಕಾಗದಪತ್ರಗಳನ್ನು ಒಯ್ಯುವ ದೂತನಂತೆ ಪರಿಗಣಿಸಿರುವುದು ಆತನಿಗೆ ಬೇಸರವನ್ನುಂಟುಮಾಡಿತು. ಪ್ರಯಾಣಭತ್ಯ ಕೂಡಾ ಕೊಡಲಿಲ್ಲ. ಇಂತಹ ಪರಾಭವವಾದುದಕ್ಕೆ ಮಾತೃಗುಪ್ತನು ರಾಜನನ್ನೂ ಆತನ ಉದ್ಯೋಗಿಗಳನ್ನೂ ಮನಸ್ಸಿನಲ್ಲಿಯೇ ತುಂಬಾ ನಿಂದಿಸಿದನು.

*　　*　　*

ಪಡಬಾರದ ಪಾಡುಪಟ್ಟು ಮಾತೃಗುಪ್ತನು ಕಾಶ್ಮೀರರಾಜ್ಯದ ಸರಿಹದ್ದಿನಲ್ಲಿದ್ದ ಕಾಂಬೂರ್ ಎಂಬ ಗ್ರಾಮವನ್ನು ಸೇರಿದ. ಊರಾಚೆ ಒಂದು ಭಾರೀ ದೊಡ್ಡ ಗುಡಾರ ಕಾಣಿಸಿತು. ಅಲ್ಲಿ ಕಾಶ್ಮೀರರಾಜ್ಯದ ಮಂತ್ರಿವರ್ಯರೆಲ್ಲಾ ತಂಗಿರುವರೆಂತಲೂ, ಯಾರಿಗಾಗಿಯೋ ಎದುರುನೋಡುತ್ತಿರುವರೆಂತಲೂ ವರ್ತಮಾನ ತಿಳಿದುಬಂತು.

ಮಾತೃಗುಪ್ತನು ತನ್ನ ಉಡುಪುಗಳನ್ನು ಬದಲಾಯಿಸಿಕೊಂಡು, ತುಸ ಶುಭ್ರವಾಗಿ ಕಾಣಿಸಿಕೊಳ್ಳಲು ತಾಪತ್ರಯಪಟ್ಟು, ಆಜ್ಞಾಪತ್ರವನ್ನು ಮುಖ್ಯಮಂತ್ರಿಗೆ ಸಮರ್ಪಿಸಲು ಸಿದ್ಧತೆ ಮಾಡಿಕೊಳ್ಳುತ್ತಿದ್ದನು.

ವಿಕ್ರಮಾದಿತ್ಯನ ಆಸ್ಥಾನದಿಂದ ದೂತನೊಬ್ಬನು ಬಂದಿರುವ ವಿಷಯ ತಿಳಿದ ತಕ್ಷಣ ದ್ವಾರಪಾಲಕರು ಮಂತ್ರಿಗಳಿಗೆ ಮನವಿಮಾಡಿದರು. ನಾಲ್ಕು ಕಡೆಗಳಿಂದಲೂ ಮಂತ್ರಿ

ಸಾಮಂತರು ಎದುರುಬಂದರು. ಮಾತೃ ಗುಪ್ತನನ್ನು ಪರಿಪರಿವಿಧವಾಗಿ ಸ್ತುತಿಸಿ, ಸಮಸ್ತವಾದ ಗೌರವಮರ್ಯಾದೆಗಳಿಂದ ಉಚಿತಾಸನದಲ್ಲಿ ಕುಳ್ಳಿರಿಸಿ, ಅಭಿವಂದಿಸಲು ಪ್ರಾರಂಭಿಸಿದರು.

ಮಾತೃಗುಪ್ತನಿಗೆ ಈ ಆದರಾಭಿಮಾನಗಳ ಅರ್ಥ ತಿಳಿಯಲಿಲ್ಲ. ಹುಟ್ಟುದರಿದ್ರನಾದ ಕವಿ ನಾಚಿಕೆಯಿಂದ ಕುಗ್ಗಿಹೋದ. ಆಗ ಮಾತೃಗುಪ್ತನಿಗೆ ಅತಿವೈಭವವಾಗಿ ಅಭಿಷೇಕ ಮಾಡಿಸಿದರು. ಸುಗಂಧದ್ರವ್ಯಗಳನ್ನು ಲೇಪಿಸಿದರು. ನವರತ್ನಖಚಿತವಾದ ಅಲಂಕಾರಗಳಿಂದ ಸಿಂಹಾಸನದಮೇಲೆ ಕೂರಿಸಿ, ಪಟ್ಟಾಭಿಷೇಕಮಾಡಿದರು. ಪಟ್ಟಾಭಿಷೇಕ ಸಮಯದಲ್ಲಿ ಮುಖ್ಯಮಂತ್ರಿ ಮಹಾ ಸಭೆಯಲ್ಲಿ ಹೀಗೆಂದು ಹೇಳಿದ :

"ಪ್ರಭೂ, ನಮ್ಮ ಕಾಶ್ಮೀರರಾಜ್ಯಕ್ಕೆ ಉಚಿತರಾದ ಪ್ರಭುಗಳು ಬೇಕೆಂದು ನಾವು ವಿಕ್ರಮಾದಿತ್ಯಮಹಾರಾಜರನ್ನು ಕೇಳಿಕೊಂಡಿದ್ದೆವು. ಅವರು ತಮ್ಮನ್ನು ನಮ್ಮ ಅರಸರನ್ನಾಗಿ ನೇಮಿಸಿ ಆಜ್ಞಾಪತ್ರ ಕಳುಹಿಸಿರುವರು. ಇನ್ನುಮುಂದೆ ನೀವೇ ನಮಗೆ ಅಧಿಪತಿಗಳಾಗಿ ನಮ್ಮನ್ನು ಕಾಪಾಡಬೇಕು."

ಮಾತೃಗುಪ್ತನಿಗೆ ಇದೆಲ್ಲವೂ ಒಂದು ಕನಸಿನಂತೆ ತೋರಿತು. ವಿಕ್ರಮಾದಿತ್ಯನ ಎಣೆಯಿಲ್ಲದ ಪ್ರಜ್ಞೆ, ಔದಾರ್ಯಗಳನ್ನು ಆತನು ಗ್ರಹಿಸಿ ತನ್ಮಯನಾದನು. ತನಗೆ ಮಹಾರಾಜರಲ್ಲಿರುವ ಭಕ್ತಿಗೌರವಗಳನ್ನೂ, ಕೃತಜ್ಞತೆಯನ್ನೂ ವ್ಯಕ್ತಪಡಿಸಿ ಒಂದು ಸೊಗಸಾದ ಶ್ಲೋಕ ರಚಿಸಿ ವಿಕ್ರಮಾದಿತ್ಯನಿಗೆ ಕಳುಹಿಸಿಕೊಟ್ಟನು.

ಗುಪ್ತನು ಅರಸನಾಗಿ ರಾಜ್ಯವನ್ನು ಬಹಳ ಚೆನ್ನಾಗಿ ಪಾಲಿಸುತ್ತಿದ್ದನು. ವಿಕ್ರಮಾದಿತ್ಯನ ರಾಜನೀತಿಯನ್ನೇ ಅನುಸರಿಸುತ್ತಿದ್ದನು. ಕವಿಗಳನ್ನೂ ಪಂಡಿತರನ್ನೂ ಸತ್ಕರಿಸಿ, ಗುಪ್ತದಾನಗಳನ್ನು ಮಾಡುತ್ತಿದ್ದನು.

ಹೀಗೇ ಇರಲು ಒಂದು ದಿನ ವಿಕ್ರಮಾದಿತ್ಯನು ಸ್ವರ್ಗಸ್ಥನಾದ ವಾರ್ತೆ ಕೇಳಿ, ಇನ್ನು ತನಗೇಕೆ ರಾಜಭೋಗ್ಯವೆಂದು ಮಾತೃಗುಪ್ತನು ಕಾಶೀಕ್ಷೇತ್ರಕ್ಕೆ ಹೋಗಿ, ಸನ್ಯಾಸವನ್ನು ಸ್ವೀಕರಿಸಿದನು.



# ಧೀರೆ ರಂಗಮ್ಮ

ಗುಟ್ಟಹಳ್ಳಿ ಎಂಬುದೊಂದು ಪುಟ್ಟಕುಗ್ರಾಮ. ಅಲ್ಲಿನವರು ಕಾಡಿನ ಮರಗಳನ್ನು ಕಡಿದು ಕಟ್ಟಿಗೆಮಾಡಿ ಹೊರಗಿನ ಪಟ್ಟಣಕ್ಕೆ ಒಯ್ದು ಮಾರಿ ಹೀಗೆ ಜೀವಿಸುತ್ತಿದ್ದರು.

ಅಲ್ಲಿರುವ ಜನರಿಗೆಲ್ಲಾ ರಂಗಮ್ಮ ನೆಂಬ ವಳು ಅಧಿ ನಾಯಕಿ. ಯಾರೊಳಗೇನಾದರೂ ತಗಾದೆಯೆದ್ದರೆ ರಂಗಮ್ಮ ನಿತ್ತ ತೀರ್ಪಿಗೆ ಎಲ್ಲರೂ ತಲೆಬಾಗುತ್ತಿದ್ದರು. ಅವಳು ಎಲ್ಲರಿಗೂ ಉಪಕರಿಸುವ ಸ್ವಭಾವದವಳಾಗಿರುವುದರಿಂದಲೇ ಗ್ರಾಮಸ್ಥರಿಗೆ ಅವಳ ಮೇಲೆ ಅಷ್ಟು ಗೌರವ. ಇದರಮೇಲೆ ಅವಳು ಅತ್ಯಂತ ಧೈರ್ಯಶಾಲಿನಿಯೂ, ತೇಜಸ್ವಿನಿಯೂ ಆದ ಹೆಂಗುಸಾಗಿದ್ದಳು.

ಅವಳಿಗೆ ಒಬ್ಬ ಮಗನ ಹೊರತು ಬೇರೆ ಯಾರೂ ಇರಲಿಲ್ಲ. ಆ ಮಗನುಕೂಡ ಅವಳ ಸ್ವಂತ ಮಗನಲ್ಲ. ಈಗ ಆ ಹುಡುಗನಿಗೆ ಹನ್ನೆರಡು ವರ್ಷ ವಯಸ್ಸು. ಕಟ್ಟಿಗೆ ಕಡಿಯುವುದೇ ಮೊದಲಾದ ಕೆಲಸಗಳಲ್ಲಿ ಅವಳಂತೆಯೇ ಗಟ್ಟಿಗ. ಹೆಸರು ರಾಮಭದ್ರ.

ಆ ಪ್ರಾಂತನೆಲ್ಲಾ ವಜ್ರಪುರದ ಸಂಸ್ಥಾನಕ್ಕೆ ಸೇರಿತ್ತು. ವಜ್ರಪುರದ ಜಮೀನುದಾರ ಕೃಷ್ಣಮಹಾರಾಜ. ಅವನ ಭಾವನೆಂಟನಾದ ವೆಂಕಟರಾಜನು ಸೈನ್ಯಾಧಿಕಾರಿಯಾಗಿ ಕೆಲಸ ಮಾಡುತ್ತಿದ್ದ. ಪ್ರಪಂಚ ಯುದ್ಧವು ಶುರು

ರಾಜಂ - ಮದರಾಸು.





ವಾದಾಗ ವಜ್ರಪುರ ಸಂಸ್ಥಾನದಿಂದ ಹಲವು ಸೈನಿಕರನ್ನು ವಿದೇಶಕ್ಕೆ ಕಳಿಸಲು ತರಬೇತು ಕೊಡುವ ಕೆಲಸ ವೆಂಕಟರಾಜನಿಗೆ ಬಂತು. ಅವನು ಸೈನಿಕರ ಕವಾಯಿತು ತರಬೇತಿಗೆ ಊರಹೊರಗಿನ ಗುಟ್ಟಹಳ್ಳಿ ಪ್ರದೇಶದ ಕಾಡನ್ನು ಏರ್ಪಡಿಸಿದನು. ಅಲ್ಲಿ ಅನೇಕ ನೂರು ಮಿಲಿಟ್ರೀ ಸೈನಿಕರು ಸೇರಿಕೊಂಡು ತುಪಾಕಿಗಳನ್ನು ಹಾರಿಸುತ್ತ ಕವಾಯಿತು ನಡೆಸುತ್ತಿದ್ದರು. ಈ ತುಪಾಕಿಗಳ ಢಾಂಢೂಂ ಶಬ್ದದಿಂದಾಗಿ ಬಡ ಗ್ರಾಮವಾಸಿಗಳಿಗೆ ಅಲ್ಲಿ ವಾಸಮಾಡಲಿಕ್ಕೇ ಭಯವಾಯಿತು. ಎಲ್ಲರೂ ರಂಗಮ್ಮನೊಡನೆ ಮೊರೆಯಿಟ್ಟರು.

ರಂಗಮ್ಮ ಅವರಿಗೆಲ್ಲಾ ಧೈರ್ಯವನ್ನು ಹೇಳಿ, ಕೆಲವರನ್ನು ಕೂಡಿಕೊಂಡು ಸೈನ್ಯಾಧಿಕಾರಿಯ ದರ್ಶನಕ್ಕಾಗಿ ಹೊರಟಳು. ಯಾರೋ ಹೆಂಗುಸು ತನ್ನ ದರ್ಶನಕ್ಕೆ ಬಂದಿರುವುದನ್ನು ತಿಳಿದು ವೆಂಕಟರಾಜನು ಅವಳಿದಿರು ಬಂದನು. ಅವಳನ್ನು ನೋಡುತ್ತಲೇ ಅವನ ಗಂಡೆದೆ ಏಕೋ ನಡುಗ ತೊಡಗಿತು. ಇವಳೂ ಅವನನ್ನು ನೋಡಿ ಬೆಚ್ಚಿಬಿದ್ದಳು.

ನಂತರ ಅವಳು ಧೈರ್ಯದಿಂದ–"ಪ್ರಭೂ, ನಾವೆಲ್ಲಾ ಬಡವರು. ಈ ಕಾಡಿನಲ್ಲಿ ಕಟ್ಟಿಗೆ ಕಡಿದು ಜೀವನ ಮಾಡುವವರು. ನಿಮ್ಮ ಮಿಲಿಟ್ರೀ ದಳವನ್ನು ಬೇರೆ ಕಡೆಗೆ ಮಾರ್ಪಡಿಸಿ ನಮ್ಮ ಜೀವನದ ಭಯವನ್ನು ಹೋಗಲಾಡಿಸಬೇಕು" ಎಂದು ಕೇಳಿಕೊಂಡಳು.

"ಅದು ಹೇಗಾದೀತು? ಇದೆಲ್ಲಾ ಸಂಸ್ಥಾನದ ಪ್ರದೇಶ. ನೀವು ಕಾಡಿನ ಮರಗಳನ್ನು ಕಡಿದು ಕಟ್ಟಿಗೆ ಮಾಡುವುದೇ ತಪ್ಪು. ಅದಕ್ಕೆ ಬೇರೆ ಸುಂಕ ಕಟ್ಟಬೇಕಲ್ಲಾ. ಇದುವರೆಗೇನೋ ತಿಳಿಯದೆ ಮಾಡಿದಿರಿ. ಇನ್ನು ಮೇಲೆ ಕಾಡಿನ ಕಟ್ಟಿಗೆ ಗಿಟ್ಟಿಗೆ ಮುಟ್ಟಿದಿರಾದರೆ ತಕ್ಕ ಶಿಕ್ಷೆ ಅನುಭವಿಸುವಿರಿ" ಎಂದ ವೆಂಕಟರಾಜ.

"ನಾವು ಮರಗಳನ್ನು ಕಡಿದರೂ ಕಾಡು ನಾಶಮಾಡುವುದಿಲ್ಲ. ಬದಲಾಗಿ ಬಳೆಸುತ್ತಿದ್ದೇವೆ" ಎಂದು ಚರ್ಚೆಮಾಡಿದಳು ರಂಗಮ್ಮ. ಆದರೆ ವೆಂಕಟರಾಜನು ಉಗ್ರನಾಗಿ ನೀವಾರೂ "ಇನ್ನೀ ಕಾಡಿನಲ್ಲಿ ವಾಸ ಮಾಡಕೂಡದು. ನಡೆಯಿರಿ. ಜಾಗ್ರತೆ!" ಎಂದು ಹೆದರಿಸಿದ.

ರಂಗಮ್ಮನಿಗೂ ರೋಷ ಬಂತು. "ಅದು ಹೇಗೆ ನಮ್ಮನ್ನು ಹೋಗೆನ್ನುವಿರಿ? ಈ ಸಂಸ್ಥಾನದ ಪ್ರಭುಗಳು ಧರ್ಮಾತ್ಮರೆಂದು ಕೇಳಿದ್ದೇನೆ. ನಮಗೆ ವಿರೋಧಿಸಿದರೆ ಅವ

ರೊಡನೆಯೇ ದೂರಿಕೊಳ್ಳುವೆನು" ಎಂದು ಅಲ್ಲಿಂದ ರಭಸವಾಗಿ ಹಿಂದಿರುಗಿದಳು.

ಬಳಿಕ ಅವಳು ತನ್ನ ಜನರಿಗೆ ಧೈರ್ಯ ಹೇಳಿ ಕಾಡಿನಲ್ಲಿ ಕಟ್ಟಿಗೆಯನ್ನು ಕಡಿಯಲು ತಾನೇ ಮುಂದಾಗಿ ನಡೆದು ಪ್ರೋತ್ಸಾಹ ಗೊಳಿಸಿದಳು. ಅವಳಿಗಿಂತ ಮುಂದೆ ಅವಳ ಮಗ ರಾಮಭದ್ರ ಕೊಡಲಿ ಹಿಡಿದು ನಡೆದ. ಒಂದು ಕಡೆ ಮಿಲಿಟರಿಯವರು ಸಾಲು ಸಾಲಾಗಿ ನಿಂತಿದ್ದರು. ಎಲ್ಲಕ್ಕೂ ಮುಂದೆ ನಿಂತಿದ್ದ ವೆಂಕಟರಾಜ ಮಿಲಿಟ್ರಿಯವರಿಗೆ ಸನ್ನೆ ಮಾಡಿ ಮೊದಲು ತಾನೇ ಒಂದು ಗುಂಡು ಹಾರಿಸಿದ. "ಕೊಲೆಗಾರ! ಹಿಡಿಯಿರಿ ಆ ಅಧಿಕಾರಿಯನ್ನು!" ಎಂದು ಗರ್ಜಿಸುತ್ತಾ ರಂಗಮ್ಮ ಮಗನಮುಂದೆ ಓಡಿದಳು. ಏನಾಯಿತೋ ಎಂದುಕೊಂಡು ಎಲ್ಲರೂ ಕೋಲುಗಳನ್ನೆತ್ತಿಕೊಂಡರು. ಕಟ್ಟಿಗೆಯನ್ನು ಕಡಿಯುತ್ತಿದ್ದ ರಾಮಭದ್ರಹುಡುಗ ಗುಂಡು ತಾಗಿ ಬಿದ್ದಿದ್ದ. ಅಷ್ಟರಲ್ಲಿ ವೆಂಕಟರಾಜನ ಇನ್ನೊಂದು ಗುಂಡು ಆ ಹುಡುಗನ ಕಡೆಗೆ ಬರುವಂಥಾದ್ದು ರಂಗಮ್ಮನಿಗೇ ತಾಗಿತು. ಅವಳೂ ಬಿದ್ದಳು. ವೆಂಕಟರಾಜನ ಈ ವರ್ತನೆಯನ್ನು ನೋಡಿ ಉಳಿದ ಮಿಲಿಟರಿಯವರೆಲ್ಲಾ ಸ್ತಬ್ಧರಾಗಿದ್ದರು. ಏಕೆ ಹೀಗಿ ಮಾಡಿದ?

ಬಿದ್ದ ರಂಗಮ್ಮ ತನ್ನವರನ್ನೆಲ್ಲಾ ಬಳಿಗೆ ಕರೆದಳು. "ಮಗು ರಾಮಭದ್ರನನ್ನೂ, ನನ್ನನ್ನೂ ಬಂಡಿಯಲ್ಲಿ ಹಾಕಿ ಜಮೀನುದಾರರ ಮನೆಗೆ ಒಯ್ಯಿರಿ. ನನ್ನ ಮನೆಯಲ್ಲಿ ಒಂದು ಚಿನ್ನದ ಹಿಡಿಯ ಕತ್ತಿಯಿದೆ; ಅದನ್ನೂ ತೆಗೆದುಕೊಳ್ಳಿ. ನಾನೂ ನನ್ನ ಮಗನೂ ಸತ್ತುಹೋದೆವೆಂದು ಇಲ್ಲಿ ಪ್ರವಾದ ಹುಟ್ಟಿಸಿರಿ" ಎಂದಳು.

ಹಾಗೆಯೇ ಊರವರು ಅವಳನ್ನು ಜಮೀನುದಾರ ಕೃಷ್ಣಮಹಾರಾಜನ ಬಳಿಗೆ ಕರೆದೊಯ್ದರು. ವೃದ್ಧ ಕೃಷ್ಣರಾಜನು ಸ್ವತಃ ಅವಳ ವಿಷಯವನ್ನು ವಿಚಾರಿಸಿದನು.—

"ಪ್ರಭು. ನಿಮ್ಮ ಸೇನಾಧಿಪತಿಯಿಂದ ನಮಗೀಗತಿ ಪ್ರಾಪ್ತವಾಯಿತು. ಆತನನ್ನು ನಾನು ಎಂಟೊಂಭತ್ತು ವರ್ಷಗಳ ಹಿಂದೆ ನಮ್ಮ ಕಾಡಿನಲ್ಲಿ ಸಂಧಿಸಿದ್ದೆ. ಒಂದು ಮುಂಜಾನೆ ನಾನು ಮರದಮೇಲೆ ಹತ್ತಿದ್ದೆ ಕಟ್ಟಿಗೆ ಕಡಿಯಲು. ಆಗ ಈತ ಮೂರು ವರ್ಷದ ಮಗುವನ್ನು ಆ ಮರದ ಬುಡದಲ್ಲಿ ತಂದು ಕತ್ತಿಯಿಂದ ಕಡಿಯಲೆತ್ನಿಸಿದ. ನಾನು ಕೂಡಲೇ ಅವನಮೇಲೆ ಹಾರಿದೆ. ಆಕತ್ತಿ ನನ್ನ ಕೈಗೆ ಸಿಕ್ಕಿತು. ಅದರಿಂದ ನಾನು ಅವನ ಭುಜದ ಬಳಿ ಗಾಯಗೊಳಿಸಿದೆ. ಆತ ಮಗುವನ್ನು ಅಲ್ಲಿ ಬಿಟ್ಟು ಓಡಿಹೋದ. ನಾನು ಆ



ಮಗುವನ್ನು ಬಹಳ ಗುಟ್ಟಾಗಿ ನನ್ನ ಮಗುವಿನಂತೆ ಕಾಪಾಡಿದೆ. ಆಗಲೇ ನಾನು ತಮ್ಮ ಮುಂದೆ ದೂರಿಕೊಳ್ಳಬೇಕಿತ್ತು. ಮಕ್ಕಳಿಲ್ಲದ ನನಗೆ ಆ ಮಗುವನ್ನು ಬಿಡಲು ಮನಸ್ಸು ಬಾರದೆ ಸುಮ್ಮನಿದ್ದೆ. ಆ ದುಷ್ಟನ ಭಯದಿಂದ ಬಹಳ ಗುಟ್ಟಾಗಿ ಸ್ಥಳ ಬದಲಾಯಿಸಿ ಬೆಳೆಸಿದೆ. ಈಗ ಅವನೊಡನೆಯೇ ಮುಖಾಮುಖಿ ನಿಂತಾಗ ಅವನಿಗೆ ನನ್ನ ಮತ್ತು ಮಗುವಿನ ಗುರುತು ಸಿಕ್ಕಿ ಹೀಗೆ ಮಾಡಿದ. ಮಗುವಿನ ಪ್ರಾಣ ಹೀರುವಗುಂಡಿಗೆ ನಾನು ಅಡ್ಡನಿಂತೆ. ಇದು ಯಾರ ಮಗುವೋ ತಿಳಿಯದು. ನಾನಿನ್ನು ಬಹುಕಾಲ ಬದುಕಲಾರೆ. ಇನ್ನೀ ಅನಾಥ ಹುಡುಗನನ್ನು ಆ ಶತ್ರುವಿನಿಂದ ಪ್ರಭುಗಳೇ ಕಾಪಾಡಬೇಕು. ಅಲ್ಲದೆ ನಮ್ಮ ನಿವಾಸದ ಭಯವನ್ನೂ ಹೋಗಲಾಡಿಸಬೇಕು..." ಎಂದು ಪ್ರಾರ್ಥಿಸಿಕೊಂಡು ಆ ಕತ್ತಿಯನ್ನು ಕೃಷ್ಣರಾಜನಿಗೆ ಒಪ್ಪಿಸಿದಳು.

ಇದನ್ನು ಕೇಳುತಿದ್ದಂತೆ ಕೃಷ್ಣರಾಜನು ಆನಂದಾಶ್ಚರ್ಯ ಪರವಶನಾದನು. ಕತ್ತಿಯನ್ನು ನೋಡಿ ಹುಡುಗನನ್ನು ಪರೀಕ್ಷಿಸಿ "ಕಂದಾ, ರಾಮಭದ್ರ! ಬದುಕಿರುವಿಯಾ ಮಗೂ!!" ಎಂದು ಅತ್ಯಾನಂದದಿಂದ ಬಾಚಿ ತಬ್ಬಿಕೊಂಡ. ಹುಡುಗನ ಕಾಲಿಗೆ ಮಾತ್ರವೇ ಗಾಯವಾಗಿತ್ತು.

ನಡೆದ ಸಂಗತಿ ಯೇನಂದರೆ, ಕೃಷ್ಣರಾಜನಿಗೆ ರಾಮಭದ್ರ ಏಕಮಾತ್ರ ಮಗ. ನಂತರ ಅವರ ಪತ್ನಿ ತೀರಿಹೋದಳು. ಒಂದು ದಿನ ಮೂರು ವರ್ಷದ ಮಗುವಿನೊಂದಿಗೆ ಒಂದು ಉತ್ಸವಕ್ಕೆ ಹೋದಾಗ ಮಗು ರಾಮಭದ್ರ ಕಾಣೆಯಾಗಿ ಹೋದ. ಎಲ್ಲೆಲ್ಲಿ ಹುಡುಕಿದರೂ ಸಿಕ್ಕಲಿಲ್ಲ. ಆದರಿಂದ ಕೃಷ್ಣರಾಜ ಬಹಳ ವೈರಾಗ್ಯ ತಾಳಿದ್ದ. ಆ ಮಗುವನ್ನು ಹುಡುಕುವುದರಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಪ್ರಯತ್ನಪಟ್ಟವ ವೆಂಕಟರಾಜನೇ.

ಹೀಗೆ ಅಗಲಿದ ಮಗ ಈಗ ಸಿಕ್ಕಿದ್ದನ್ನು ನೋಡಿ ಯಾವ ತಂದೆಗೆ ಆನಂದವಾಗಲಿಕ್ಕಿಲ್ಲ?

ಕೂಡಲೇ ಜಮೀನುದಾರನು ಭಾವ ವೆಂಕಟರಾಜನನ್ನು ಅರೆಸ್ಟ್ ಮಾಡಿಸಿ ವಿಚಾರಣೆಗೆ ಗುರಿಪಡಿಸಿದನು. ರಾಮಭದ್ರನನ್ನು ಕೊಂದುಹಾಕಿಬಿಟ್ಟರೆ ವಜ್ರಪುರ ಸಂಸ್ಥಾನಕ್ಕೆ ವೆಂಕಟರಾಜನೇ ಉತ್ತರಾಧಿಕಾರಿಯಾಗಲಿಕ್ಕಿದ್ದ. ಆ ತಂತ್ರವೀಗ ಬಯಲಾಗಿ ಅವನು ಕಾರಾಗೃಹದಲ್ಲಿ ಕೊಳೆಯಬೇಕಾಯಿತು.

ನಂತರ ಮೂರೇ ದಿನಗಳಲ್ಲಿ ರಂಗಮ್ಮನು ನೆಮ್ಮದಿಯಾಗಿ ಸತ್ತಳು. ಎರಡುಬಾರಿ ಹುಡುಗನನ್ನು ಕಾಪಾಡಿದ ಧೀರ ರಂಗಮ್ಮನ ಸ್ಮಾರಕವಾಗಿ ಊರ ನಡುವೆ ಒಂದು ವೃಂದಾವನ್ನು ಕಟ್ಟಿಸಿದ ಕೃಷ್ಣಮಹಾರಾಜ.



# ಪಿಳಿ ಪಿಳಿ ಕಣ್ಣು!

ಮಣಿಕ್ಕಾರ ಗೋಪಾಲಕೃಷ್ಣಶಣೈ

ದಂಪತಿಗಳಾದ ಶಂಕರಮ್ಮ ಕ್ಷೀರಸಾಗರ ಭಟ್ಟರು ಬಹಳ ಎಚ್ಚರಿಕೆಯಿಂದ ಜೀವನ ನಡೆಸುತ್ತಿದ್ದರು—ಅಂದರೆ ಜಿಪುಣಶಿಖಾಮಣಿಗಳು. ಹಬ್ಬಹಾಡಿಗಳಲ್ಲಿ ಕೂಡಾ ಗಂಜಿಯುಂಡು ತೃಪ್ತರಾಗುತ್ತಿದ್ದರು. ಆದರೂ ಚೌತಿ ಹಬ್ಬಕ್ಕೆ ಲಡ್ಡು ತಿನ್ನುವ ಆಸೆಯಾಗಿ ಹೇಗೋ ಬಹಳ ಕಷ್ಟದಿಂದ ೨೫ ಲಡ್ಡುಗಳನ್ನು ಮಾಡಿಟ್ಟರು.

ಮಧ್ಯಾಹ್ನದ ವೇಳೆಗೆ ಸರಿಯಾಗಿ ಶಂಕರಮ್ಮನ ತಮ್ಮ ಆದಿಶೇಷ ದೂರದಲ್ಲಿ ಬರುವುದು ಕಂಡಿತು. ಕೂಡಲೇ ಇಬ್ಬರೂ ಗುಸುಗುಸು ಉಪಾಯ ಮಾತಾಡಿಕೊಂಡು, ಕ್ಷೀರಸಾಗರ ಭಟ್ಟರು ಒಂದು ಹಂಡೆಗೆ ಕಸಬರಿಕೆಯಿಂದ ಬಡಬಡ ಹೊಡೆದರು. "ಅಯ್ಯೊ ಅಯ್ಯೊ! ನನ್ನನ್ನು ಕೊಲ್ಲುತ್ತಾರೆ. ನಾನು ತೌರುಮನೆಗೆ ಹೋಗ್ತೀನಿ" ಎಂದು ಕೂಗುತ್ತಾ ಶಂಕರಮ್ಮ ಹೊರಕ್ಕೆ ಓಡಿದಳು. ಅವಳು ಕೂಗಿದ್ದು ಆದಿಶೇಷನ ಕಿವಿಗೂ ಬಿತ್ತು. ಹಂಡೆಗೆ ಹೊಡೆದುದನ್ನು ಕೇಳಿ ಅವಳ ಬೆನ್ನಿಗೆ ಹೊಡೆದಂತೆ ಅವನಿಗೆ ಭಾಸವಾಯಿತು. ಕ್ಷೀರಸಾಗರ ಭಟ್ಟರು ಮನೆಯ ಬಾಗಿಲು ಎಳೆದುಕೊಂಡು ಅವಳನ್ನು ಅಟ್ಟಿಸಿಕೊಂಡು ಹೋದರು.

ಇದೆಲ್ಲಾ ನೋಡಿದ ಆದಿಶೇಷ 'ಇದೇನು ಅವಾಂತರವಪ್ಪಾ' ಎಂದು ಅಲ್ಲೇ ಜಗಲಿಯಲ್ಲಿ ಕುಳಿತ. ಅವನೂ ಒಳ್ಳೇ ಘಾಟೀ ಯುವಕ. ನಡೆದು ಬಂದ ಆಯಾಸದಿಂದಲೋ ಏನೋ! ಕೂಡಲೇ ನಿದ್ದೆಬಂದಿತವನಿಗೆ.

ಬಾಗಿಲ ಚಿಲಕ ಮೊದಲೇ ಮುರಿದಿತ್ತು. ಜಿಪುಣತನದಿಂದ ರಿಪೇರಿಕೂಡಾ ಮಾಡಿರಲಿಲ್ಲ. ಗಾಳಿಗೆ ಮನೆಯ ಬಾಗಿಲು ತೆರೆದುಕೊಂಡು, ಕಾದಿದ್ದ ಪೋಲಿನಾಯಿ ಒಳಗೆ ನುಗ್ಗಿ ಸ್ವೇಚ್ಛೆಯಾಗಿ ಲಡ್ಡಿನ ಪಾತ್ರೆಯನ್ನುರುಳಿಸಿ ಹೊಡೆಯಲಾರಂಭಿಸಿತು.

ಸ್ವಲ್ಪ ಹೊತ್ತಾದಮೇಲೆ ಇನ್ನು ಆದಿಶೇಷ ಕೇಳುವವರಿಲ್ಲದೆ ಹೊರಟುಹೋಗಿರಬಹುದೆಂದುಕೊಂಡು, ದಂಪತಿಗಳು ಮನೆಗೆ ಬಂದರು. ಅವನು ಜಗಲಿಯಲ್ಲಿ ಮಲಗಿರುವುದನ್ನು ನೋಡಿ, "ಸರಿ, ಇವನು ಏಳುವುದರೊಳಗೆ ಲಡ್ಡು ತಿಂದು ಮುಗಿಸೋಣ" ಎಂದು ಪಿಸುಗುಟ್ಟಿಕೊಂಡು ಒಳಗೆ ಹೋದರು. ಇವರನ್ನು ನೋಡಿ ನಾಯಿ 'ಕ್ಯೊಂ' ಎಂದು ಅರಚಿಕೊಂಡು ಹೊರಗೆ ಓಡಿತು. ಪಾಪ! ಅಲ್ಲೇನಿದೆ?—ನಾಯಿಯ ಎಂಜಲು ಲಡ್ಡು! ಆದಿಶೇಷನೂ ಎದ್ದು ಒಳಕ್ಕೆ ಬಂದ!

ಮೂವರ ಕಣ್ಣೂ ಪಿಳಿ ಪಿಳಿ, ಪಿಳಿ ಪಿಳಿ!!!

# ಸೃಷ್ಟಿ ವೈಚಿತ್ರ್ಯ



ಪೆರು ದೇಶದಲ್ಲಿ 'ಕುಜುಕೊ' ಎಂಬ ಕೋಟೆ ಬಹಳ ಪ್ರಸಿದ್ಧವಾದುದು. ಇದನ್ನು ಆದಿಮನಿವಾಸಿಗಳಾದ 'ಇನ್‌ಕಾಸ್' ಎಂಬ ಜಾತಿಯವರು ನಿರ್ಮಿಸಿದರು. ಇದು ಅನಾದಿಕಾಲದಲ್ಲಿ ನಿರ್ಮಿಸಲ್ಪಟ್ಟ ಬ್ರಹ್ಮಾಂಡವಾದೊಂದು ಕಟ್ಟಡ. ಇದರ ಕಟ್ಟಡದ ಕಲ್ಲುಗಳು ಒಂದೊಂದು ಎರಡೆರಡು ಟನ್ನುಗಳು ಭಾರವಿವೆ. ಈ ಕೋಟೆ ಪೂರ್ತಿ ಮಾಡಲಿಕ್ಕೆ ತೊಂಭತ್ತು ವರ್ಷಕಾಲ ಹಿಡಿಯಿತು.

ಅತೀ ಪ್ರಾಚೀನ ಕಾಲದಲ್ಲಿಯ ವಿಚಿತ್ರಗಳಲ್ಲಿ ಒಂದು ಈ ಪಟದಲ್ಲಿ ಕಾಣುವ ಮಹಾವೃಕ್ಷ. ಇದು ಅತ್ಯಂತ ದೊಡ್ಡ ಮರ. ಅತ್ಯಂತ ಪೂರ್ವಿಕವಾದುದು ಅಮೆರಿಕಾದೇಶದೊಳಗಿನ ಕಾಲಿಫೋರ್ನಿಯಾದಲ್ಲಿ ಇರುವಂತಹ 'ರೆಡ್‌ವುಡ್' ವೃಕ್ಷವಿದು. ಇದರ ಸುತ್ತಳತೆ ನೂರೊಂದೂವರೆ ಅಡಿಗಳು. ಇದರ ಎತ್ತರ ಮುನ್ನೂರು ಅಡಿಗಳು. ಇದರ ವಯಸ್ಸು ಮೂರು ಸಾವಿರ ವರ್ಷಗಳನ್ನು ಮೀರುತ್ತವೆ. ಎಷ್ಟು ತಲೆಮಾರನ್ನು ನೋಡಿತೋ!





ಚೆನ್ನಾಗಿ ಬೆಳೆದ ಮಾನವ ಶರೀರದಲ್ಲಿರುವ ರಕ್ತನಾಳಗಳನ್ನು ಅಳತೆ ಮಾಡಿದರೆ ಸುಮಾರು ಅರುವತ್ತು ಸಾವಿರ ಮೈಲು ನೀಳವಿರುವುದೆಂದು ಲೆಕ್ಕ ಹಾಕಲ್ಪಟ್ಟಿದೆ. ಚಿತ್ರ ವಿಚಿತ್ರವಾಗಿ ಹಾಸುಹೊಕ್ಕಾಗಿರುವ ಈ ಅದ್ಭುತ ಸೃಷ್ಟಿ ವೈಚಿತ್ರ್ಯದ ನಿರ್ಮಾಣದಲ್ಲಿ ಐದರಿಂದ ಏಳು 'ಕ್ವಾರ್ಟ್ಸ್' ರಕ್ತವು ಪ್ರವಹಿಸುತ್ತಿರುವುದೆಂದು ಕೂಡಾ ಶಾಸ್ತ್ರಜ್ಞರು ಗುಣಿಕೆ ಹಾಕಿ ಹೇಳುತ್ತಾರೆ.




## 4

[ಕುಂಡಲಿನೀರಾಜ ಸೇನೆಗಳು ಧನಾಗಾರವನ್ನು ತುಂಬಿಸಲು ಪರರಾಜ್ಯಕ್ಕೆ ದಾಳಿಹೊರಟುವು. ಅಶುಭಸೂಚಕವಾಗಿ ಧೂಮಕೇತು ತೋರಿಬಂತು. ತುಫಾನಿಗೆ ಸಿಕ್ಕಿ ಹಡುಗುಗಳು ಮುಳುಗಿದುವು. ಕೆಲವರು ಒಂದು ದ್ವೀಪವನ್ನು ಸೇರಿದರು. ಅಲ್ಲಿ ಕ್ರೂರ ಮೃಗಗಳಿಂದಲೂ. ಏಕಾಕ್ಷೀ ಮಂತ್ರವಾದಿಯಿಂದಲೂ ತಪ್ಪಿಸಿಕೊಂಡು ಓಡಿದರು. ತರುವಾಯ—]

**ಸ**ಮರಸೇನನೂ ಮತ್ತು ಆತನ ಸಂಗಡಿಗರೂ ಓಡುತ್ತಾ ಹೋಗಿ ಒಂದು ಬೆಟ್ಟಪ್ರದೇಶವನ್ನು ಸೇರಿಕೊಂಡರು. ಈಗ ಅವರಿಗೆ ಆ ಮಾಂತ್ರಿಕನಾದ ಏಕಾಕ್ಷಿಯ ಭಯಂಕರ ಸ್ವರ ಕೇಳಿಸುತ್ತಿರಲಿಲ್ಲ. 'ಬದುಕಿದೆವಪ್ಪಾ' ಎಂದಂದುಕೊಂಡರು. ಚತುರ್ನೇತ್ರನ ಗೂಢಚಾರರಾಗಿ ಕೆಲಸ ಮಾಡುವ ಕಪ್ಪುಗೂಬೆ ಮತ್ತು ನರವಾನರ ಏನಾದರೋ ಅವರಿಗೆ ತಿಳಿಯದು. ತಮ್ಮನ್ನು ಹಿಂಬಾಲಿಸುತ್ತಿಲ್ಲವೆಂಬುದನ್ನು ಮಾತ್ರ ಬಲ್ಲರು. ಆದರಿಂದ ಅವರ ಮನಸ್ಸು ನೆಮ್ಮದಿ ಹೊಂದಿ ಸಂತೋಷಚಿತ್ತರಾದರು.

ಆದರೆ ಮುಂದಿನ ಕರ್ತವ್ಯವೇನು? ಮತ್ತೊಂದು ಸಂಕಟದಲ್ಲಿ ಸಿಲುಕುವ ಮೊದಲೇ ಮಾಯಾದ್ವೀಪದಿಂದ ತಪ್ಪಿಸಿಕೊಂಡು ಹೊರಬೀಳಬೇಕು. ಆದರೆ ಹೇಗೆ ಈ ದ್ವೀಪವನ್ನು ಬಿಟ್ಟು ಹೋಗುವುದು? ಅವರು ಹಿಂದೆ ಬಿಟ್ಟು ಬಂದ ಹಡಗುಗಳು ಸಮುದ್ರದ ಯಾವ ದಿಕ್ಕಿನಲ್ಲಿದೆ? ತಾವು ಈ ದ್ವೀಪದ ಯಾವ ಕಡೆಯಲ್ಲಿದ್ದೇವೋ ಎಂದು ಯೋಚಿಸುತ್ತಿದ್ದರು.

ಈ ದ್ವೀಪವನ್ನು ಆವರಿಸಿರುವ ಮಹಾರಣ್ಯದ ಮಧ್ಯೆ ದಿಕ್ಕು ತಿಳಿಯುವ ಬಗೆ ಹೇಗೆ? ಆ ಪ್ರದೇಶವೆಲ್ಲಾ ಬೆಟ್ಟಗುಡ್ಡಗಳಿಂದ ಆವರಿ





ಸಿದೆ. ಮುಗಿಲನ್ನು ಮುಟ್ಟುವಂತಹ ಮಹಾ ವೃಕ್ಷಗಳು! ಆ ಮರಗಳನ್ನುಬಳಸಿಕೊಂಡಿರುವ ಬಳ್ಳಿಗಳು!! ಇಂತಹ ಭಯಾನಕ ಪ್ರದೇಶದಲ್ಲಿ ದಿಕ್ಕು ತಿಳಿಯುವುದೆಂತು? ದಿಕ್ಕು ತಿಳಿದರಷ್ಟೇ ತಾವಿರುವ ಸ್ಥಳವನ್ನು ಅರಿಯಲು ಸಾಧ್ಯ?

ಸಮರಸೇನನು ಈ ತೊಡಕಾದ ಪ್ರಶ್ನೆಗಳಿಂದ ಪೇಚಾಡುತ್ತಿರಲು, ಆಕಾಶವನ್ನು ಕವಿದಿದ್ದ ಮೋಡಗಳು ಇದ್ದಕ್ಕಿದ್ದಹಾಗೆ ಚದುರಿ, ಸೂರ್ಯನು ಕಾಣಿಸಿಕೊಂಡನು. ದಿನಮಣಿಯ ಚಲನೆಯನ್ನು ನೋಡಿ ಆ ದ್ವೀಪದ ಯಾವ ದಿಕ್ಕಿನಲ್ಲಿ ತಾವಿರುತ್ತೇವೆ ಎಂಬುದನ್ನು ತಿಳಿದುಕೊಂಡ ಸಮರಸೇನ.

"ಈ ಮಾಯಾದ್ವೀಪದ ಪಶ್ಚಿಮ ದಿಕ್ಕಿನಲ್ಲಿ ನಾವಿದ್ದೇವೆ. ನಮ್ಮ ಹಡಗುಗಳು ಪೂರ್ವದಿಕ್ಕಿನಲ್ಲಿವೆ" ಎಂದ ಸಮರಸೇನ ಯೋಚನೆಯ ಭಾರದಿಂದ. "ಹಾಗಿದ್ದಲ್ಲಿ, ನಾವು ಹೇಗಾದರೂ ಮಾಡಿ ನಮ್ಮ ಹಡಗುಗಳಿರುವ ಸ್ಥಳವನ್ನು ಸೇರಿಕೊಳ್ಳುವುದು ಉತ್ತಮವಲ್ಲವೆ?" ಎಂದು ಒಬ್ಬ ಸೈನಿಕನು ತನ್ನ ಉದ್ದೇಶ ತಿಳಿಸಿದ.

"ಹೌದು...ಉತ್ತಮವೇನೋ ಹೌದು. ಆದರೆ ಅಲ್ಲಿಗೆ ಹೋಗಿ ಸೇರುವುದೆಂತು? ಅದೇನೂ ಸಾಮಾನ್ಯವಾದ ವಿಷಯವಲ್ಲ. ಅನೇಕ ಅಡ್ಡಿ ಆತಂಕಗಳಿವೆ. ಸಲೀಸಾಗಿ ನಡೆದು ಹೋಗುವಂತಿಲ್ಲ. ಬೆಟ್ಟ ಗುಡ್ಡಗಳು, ಅರಣ್ಯಗಳು, ಭಯಂಕರ ಮೃಗಗಳು ಮುಂತಾದುವುಗಳಿಂದ ತಪ್ಪಿಸಿಕೊಂಡು ಹೊರಬಿದ್ದರಷ್ಟೇ ನಾವು ಆ ತೀರ ಸೇರುವುದು ಸಾಧ್ಯ" ಎಂದು ಸಂಶಯ ಸೂಚಿಸುತ್ತಾ ಸಮರಸೇನನು ನಿಟ್ಟುಸಿರನ್ನು ಬಿಟ್ಟ.

ತಮ್ಮ ನಾಯಕನು ಈ ರೀತಿ ಎದೆಗುಂದಿರುವುದನ್ನು ಕಂಡು ಇತರ ಸೈನಿಕರೂ ಧೈರ್ಯಗೆಟ್ಟರು. ಅವರ ಸ್ಥಿತಿಯನ್ನು ಕಂಡ ಸಮರಸೇನನು "ನೀವು ಸೂಚಿಸಿದಂತೆ ಪೂರ್ವದಿಕ್ಕಿಗೆ ಹೋಗಿ ಸೇರಿಕೊಳ್ಳುವುದು ಉತ್ತಮವೆಂದು ನನಗೂ ತೋರುತ್ತಿದೆ. ಹಾಗೆಯೇ ಮಾಡೋಣ. ತೊಂದರೆಗಳ ವಿಷಯ ಬಿಡಿ. ಕೈಯಲ್ಲಿ ಖಡ್ಗ. ಕುಂಡಲಿನೀ ದೇವಿಯ ಕೃಪೆ— ಈ ಎರಡು ರಕ್ಷೆಗಳಿದ್ದಷ್ಟುಕಾಲ ನಾವು ಯಾವ ತೊಂದರೆ ಬಂದರೂ ಅದರಿಂದ ಪಾರಾಗಬಹುದು ಏಳಿ. ನನ್ನೊಂದಿಗೆ ಬನ್ನಿ" ಎಂದು ಅವರಲ್ಲಿ ಉತ್ಸಾಹವನ್ನು ತುಂಬಿದನು.



ಅವರಮುಂದೆ ಆತನು ನಡೆದನು. ಮುಂದೆ ನಾಲ್ಕು ಹೆಜ್ಜೆ ಯಿಟ್ಟರೋ ಇಲ್ಲವೋ ಸಮರಸೇನನು ತಟ್ಟನೆ ನಿಂತು "ಹುಸ್. ನಿಲ್ಲಿ" ಎಂಬಂತೆ ತನ್ನ ಸೈನಿಕರಿಗೆ ಕೈಯಿಂದ ಸಂಜ್ಞೆ ಮಾಡಿದ. ಆತನು ಅನುಮಾನ ಗೊಂಡಂತೆ ಅವರ ಮುಂದೆ ಒಂದು ಭಯಂಕರ ದೃಶ್ಯ ಕಾಣಿಸಿತು. ಎಂತಹ ಧೈರ್ಯವಂತ ನನ್ನಾದರೂ ನಡುಗಿಸಬಲ್ಲ ದೃಶ್ಯವದು! ಒಂದು ಹೆಬ್ಬಾವು ಮರದಮೇಲಿಂದ ಕೆಳಕ್ಕೆ ಇಳಿಯುತ್ತಿದೆ! ಕೆಳಗೆ ಎರಡು ಚಿರತೆಗಳು ಆ ಸರ್ಪ ಬರುತ್ತಿರುವ ವಿಷಯವನ್ನು ತಿಳಿ ಯದೆ ಮೈಮರೆತು ನಿಂತಿವೆ!!

ಅವರು ನೋಡುತ್ತಿದ್ದಂತೆಯೇ ಆ ಹೆಬ್ಬಾವು ಚಿರತೆಯೊಂದರ ಕತ್ತನ್ನು ಹಿಡಿಯಿತು. ಮೊದಲು ಸರ್ಪವು ಬಾಯಿಂದ ಅದನ್ನು ಕಚ್ಚಿ ಹಿಡಿಯಿತು. ಕೂಡಲೇ ಅದರ ಶರೀರವನ್ನೆಲ್ಲಾ ಹಗ್ಗದಿಂದ ಬಿಗಿಯುವಂತೆ ಬಳಸಿ ಸುತ್ತಿ ಕೊಂಡಿತು. ಇದನ್ನು ಕಂಡ ಇನ್ನೊಂದು ಚಿರತೆ ಭಯದಿಂದ ಓಡಿಹೋಯಿತು.

ಹಾಗೆ ಓಡಿಹೋದ ಚಿರತೆ ಏನೆಂದು ಕೊಂಡಿತೋ ಏನೋ ಮರುಕ್ಷಣವೇ ರಭಸ ದಿಂದ ಬಂದು ಆ ಹಾವಿನಮೇಲೆ ಹಾರಿತು. "ನಡೆಯಿರಿ. ಇಂತಹ ಅಪಾಯದಲ್ಲಿ ಸಿಲುಕಿ ಕೊಳ್ಳದಂತೆ ಎಚ್ಚರ ವಹಿಸಬೇಕು ನಾವು" ಎಂದು ಸೈನಿಕರಿಗೆ ಹೇಳಿದ ಸಮರಸೇನ.

ಆ ತರುವಾಯ ಅವರೆಲ್ಲಾ ಮುಂದೆ ನಡೆದು ಮತ್ತೊಂದು ದಾರಿ ಹಿಡಿದರು.





ಓಡಾಡಲು ಆ ಧಾರಿ ಅನುಕೂಲವಾಗಿರಲಿಲ್ಲ. ಅನೇಕ ಝುರಿಗಳು ಪಕ್ಕದಲ್ಲಿದ್ದ ಬೆಟ್ಟಗಳ ಮೇಲಿಂದ ಇಳಿದು ಆ ಪ್ರದೇಶವನ್ನು ಕೆಸರುಮಯವನ್ನಾಗಿ ಮಾಡಿತ್ತು. ಎಲ್ಲಿ ನೋಡಿದರೂ ಕಾಶೆಹುಲ್ಲಿನ, ಬೊಂಬಿನ ಪೊದೆಗಳಿದ್ದವು. ಹುಲ್ಲು ಮೊಣಕಾಲಿನ ಎತ್ತರ ಬೆಳೆದು ನಡೆಯಲು ಕಷ್ಟಕರವಾಗಿತ್ತು. ಪೂರ್ವತೀರವನ್ನು ಮುಟ್ಟಬೇಕೆಂದರೆ ಇವುಗಳನ್ನು ಹಾದುಕೊಂಡು ಹೋಗಬೇಕು. ತಮ್ಮ ಪ್ರಾಣಗಳನ್ನು ಅಂಗೈಯಲ್ಲಿಟ್ಟುಕೊಂಡು ಮುಂದೆ ನಡೆದರು ಆ ವೀರ ಸೈನಿಕರು!

ಯಥಾಪ್ರಕಾರ ಸಮರಸೇನ ಮುಂದೆ ನಡೆಯುತ್ತಿದ್ದ. ತನ್ನ ಸೈನಿಕರಿಗೆ ಧೈರ್ಯಹೇಳುತ್ತ ಹೋಗುತ್ತಿದ್ದನು. ಸ್ವಲ್ಪದೂರ ಸಾಗಿದ ತರು



ವಾಯ ಸಮರಸೇನನು "ಈ ಪ್ರಾಂತದಲ್ಲಿ ಬಹುಶಃ ನೀರಿನ ವಸತಿ ಹೆಚ್ಚಾಗಿರುವುದೆಂದು ತಿಳಿಯುತ್ತೇನೆ. ಅಂದರೆ ಕೊಳಗಳ ಹತ್ತಿರ ನೀರು ಕುಡಿಯಲು ಪ್ರಾಣಿಗಳು ಆಗಾಗ್ಗೆ ಬರುತ್ತಿರಬೇಕು. ನಾವು ಕಾಡುಮೃಗಗಳಿಗೆ ಭಯಪಟ್ಟಷ್ಟು ಈ ಪ್ರಾಣಿಗಳಿಗೆ ಭಯಪಡಬೇಕಾಗಿಲ್ಲ..." ಎಂದ.

ಆತನು ಈ ಮಾತು ಮುಗಿಸಿದನೋ ಇಲ್ಲವೋ ಪಕ್ಕದಲ್ಲಿದ್ದ ಕಾಶೆಹುಲ್ಲಿನ ಪೊದೆಯಿಂದ ಒಂದು ಖಡ್ಗಮೃಗವು ಹೊರಗೆ ಬಂದಿತು. ಅದನ್ನು ಕಂಡ ಕೂಡಲೇ ಓಡಲು ಹವಣಿಸಿದರು ಸೈನಿಕರು. ಇದನ್ನು ಗ್ರಹಿಸಿದ ಸೇನಾಧಿಪತಿ "ನಾವು ಓಡಲು ಪ್ರಯತ್ನಿಸಿದರೆ ಇನ್ನಷ್ಟು ಪ್ರಮಾದವುಂಟಾಗಬಹುದು. ಒಂದು ಕೆಲಸ ಮಾಡಿ. ಒಬ್ಬರ ಹಿಂದೊಬ್ಬರು ಸಾಲಾಗಿ ನಿಂತು, ನಿಮ್ಮ ನಿಮ್ಮ ಖಡ್ಗಗಳನ್ನು ಸಿದ್ಧವಾಗಿಟ್ಟುಕೊಂಡಿರಿ" ಎಂದ.

ಖಡ್ಗಮೃಗವು ತಲೆಯನ್ನು ಮೇಲಕ್ಕೆತ್ತಿ ಭಯಂಕರವಾಗಿ ಘರ್ಜಿಸಿ ಮುಂದಿನ ಕಾಲುಗಳಿಂದ ನೆಲವನ್ನು ಕೆದಕಿಚಿಮ್ಮಿತು. ಸೈನಿಕರು ಭೀತಿಯಿಂದ ತಲ್ಲಣಿಸಿದರು.

ಮತ್ತೊಂದುಬಾರಿ ಖಡ್ಗಮೃಗವು ಕಾಲುಗಳಿಂದ ಕೆದಕಿ, ರಭಸದಿಂದ ಅವರಕಡೆ ನುಗ್ಗಿತು. ಸಮರಸೇನನು ಸಮಯ ನೋಡಿ ತನ್ನ ಖಡ್ಗದಿಂದ ಅದರ ಬೆನ್ನನ್ನು ತೀಡಿದ. ಬೇರೆ ಯಾವ ಮೃಗವಾದರೂ ಆಗಿದ್ದರೆ ಆ ಏಟಿಗೆ ಕೆಳಗೆ ಉರುಳಬೇಕಾಗಿತ್ತು. ಆದರೆ





ಆ ಏಟು ಖಡ್ಗಮೃಗಕ್ಕೆ ಯಾವ ಅಪಾಯವನ್ನೂ ಮಾಡಲಿಲ್ಲ. ಸಮರಸೇನನು ಮಾಡಿದ ಕಾರ್ಯಕ್ಕೆ ಅದು ಅರಣ್ಯವೆಲ್ಲಾ ಅದುರುವಂತೆ ಅರಚಿ, ಮತ್ತೊಮ್ಮೆ ನೆಲವನ್ನು ಕೆದಕಿ ಸೈನಿಕರ ಕಡೆಗೆ ವೇಗದಿಂದ ಹಾರಿತು.

ಈಗ ಸೈನಿಕರು ಭಯಕಂಪಿತರಾಗಲಿಲ್ಲ. ತಮ್ಮ ನಾಯಕನು ತೋರಿದ ಧೈರ್ಯ ಅವರಲ್ಲಿ ಒಂದು ವಿಧವಾದ ಆವೇಶವನ್ನುಂಟು ಮಾಡಿತು. ಒಳ್ಳೇ ಧೈರ್ಯದಿಂದ ನಾಲ್ಕು ಜನ ನಾಲ್ಕು ಕಡೆಯಿಂದ ಆ ಪ್ರಾಣಿಯನ್ನು ಸುತ್ತುಗಟ್ಟಿದರು. ಮತ್ತಿಬ್ಬರು ಅದರ ಹೊಟ್ಟೆಯಮೇಲೆ ತಮ್ಮಿಷ್ಟಾನುಸಾರವಾಗಿ ಅದನ್ನು ತಿವಿಯಲು ಪ್ರಾರಂಭಿಸಿದರು. ಏಕಾಏಕೀ ಇವರೆಲ್ಲರ ಅಘಾತಕ್ಕೆ ಗುರಿಯಾದ ಆ ಖಡ್ಗಮೃಗವು ಒಂದುಕಡೆ ಉರುಳಿ ಭೀಕರವಾಗಿ ಚೀರಿ ಒದ್ದಾಡ ತೊಡಗಿತು.

ಆದರೆ ಅದು ಏನನ್ನೂ ಮಾಡುವ ಸ್ಥಿತಿಯಲ್ಲಿರಲಿಲ್ಲ. ಅದರ ಕೂಗಾಟವನ್ನು ಕೇಳಿ ಅದರ ಜತೆ ಮೃಗಗಳು ಬಂದರೆಮಾತ್ರ ಇವರ ಗತಿ ಮುಗಿದಂತೆಯೇ! ಆದರೆ ಪುಣ್ಯವಶದಿಂದ ಆ ಘೋರ ಮೃಗದ ಕೂಗುವ ಶಕ್ತಿಯೂ ಉಡುಗಿಹೋಯಿತು. ಆಗ ಎಲ್ಲರಿಗೂ ಸ್ವಲ್ಪಧೈರ್ಯ ಬಂತು.

ಸಮರಸೇನನು ತನ್ನ ಸಂಗಡಿಗರೊಂದಿಗೆ "ಸದ್ಯಕ್ಕೆ ಒಂದು ಗಂಡಾಂತರ ಕಳೆಯಿತು. ಕೂಡಲೇ ಇಲ್ಲಿಂದ ತಪ್ಪಿಸಿಕೊಂಡು ಹೋಗುವುದು ಕ್ಷೇಮಕರ" ಎಂದು ಹೇಳಿ ತಾನು ಮುಂದೆ ನಡೆದ. ಎಲ್ಲರೂ ಅವನನ್ನನುಸರಿಸಿ






ದರು. ಆಯಾಸದಿಂದಲೂ ಬಾಯಾರಿಕೆ ಯಿಂದಲೂ ಅವರೆಲ್ಲಾ ಸಂಕಟಪಡುತ್ತ ಮುಂದೆಮುಂದೆ ನಡೆಯುತಿದ್ದರು.

ತುಸ ದೂರ ಹೋಗುವಷ್ಟರಲ್ಲಿ ಅವರಿಗೆ ಒಂದು ಕೊಳ ಕಾಣಿಸಿತು. ಅದನ್ನು ಕಂಡ ಕೂಡಲೇ ಖಡ್ಗಮೃಗದೊಂದಿಗೆ ಸೆಣಸಿ ಆಯಾಸಗೊಂಡಿದ್ದ ಸೈನಿಕರು ಆನಂದದಿಂದ ಅದರಲ್ಲಿ ಇಳಿದು ನೀರಡಿಕೆ ತೀರಿಸಿಕೊಳ್ಳ ಬೇಕೆಂದು ಆತುರಪಟ್ಟರು.

ಅವರಲ್ಲೊಬ್ಬನು "ಆಹಾ, ಎಷ್ಟು ತಿಳಿ ಯಾಗಿದೆ ನೀರು. ಈ ಸ್ವಚ್ಛವಾದ ನೀರಿನಲ್ಲಿ ಮುಳುಗು ಹಾಕಿದರೆ ನಮ್ಮ ಆಯಾಸವೆಲ್ಲಾ ಪರಿಹಾರವಾಗುವುದು" ಎಂದ.

ಇದನ್ನು ಕೇಳಿ ಸಮರಸೇನನು "ಇದು ಮಾಯಾದ್ವೀಪವೆಂಬ ಮಾತನ್ನು ಮಾತ್ರ ಮರೆಯಬೇಡಿರಿ. ಜೋಕೆ" ಎಂದು ಎಚ್ಚರಿಕೆ ಕೊಟ್ಟ. ಬಹಳ ಬಾಯಾರಿಕೆ ಹೊಂದಿದ್ದ ಇಬ್ಬರು ಸೈನಿಕರು ತಾಳಲಾರದೆ ಅಂಜತ್ತಾ ಮೊದಲು ಕೊಳದಲ್ಲಿ ಇಳಿದರು.

ಹಾಗವರು ಕೊಳದಲ್ಲಿ ಇಳಿದ ತಕ್ಷಣ ಸುತ್ತಮುತ್ತಲಿನ ನೀರು ಅಲುಗಾಟ ಪ್ರಾರಂಭ ವಾಯಿತು. ಹಠಾತ್ತನೆ ಅವರಮೇಲೆ ಐದಾರು ಮೊಸಳೆಗಳು ಹಾರಿದವು. ಅವರು ಭಯದಿಂದ ಅರಚಿಕೊಂಡರು.

ದಡದಲ್ಲಿ ನಿಂತಿದ್ದ ಸೈನಿಕರೂ ಸಮರ ಸೇನನೂ ಅವುಗಳಮೇಲೆ ಬಾಣಗಳನ್ನು





ಬಿಟ್ಟರು. ಎಲ್ಲಾ ನಿಷ್ಪ್ರಯೋಜನವಾದವು. ಆ ಸೈನಿಕರಿಬ್ಬರನ್ನೂ ಮೊಸಳೆಗಳು ಕೊಳದ ನಡುವೆ ಎಳೆದುಕೊಂಡು ಹೋದವು. ಮತ್ತೊಂದು ಕ್ಷಣದಲ್ಲಿ ಅವರು ಕಾಣದಾದರು.

ಈ ವಿಷಾಧ ಘಟನೆ ಎಲ್ಲರ ಧೈರ್ಯವನ್ನೂ ಕುಗ್ಗಿಸಿತು. ದೀನವದನರಾಗಿ ಸಮರಸೇನನೂ ಮತ್ತು ಉಳಿದ ನಾಲ್ವರು ಸೈನಿಕರೂ ಅಲ್ಲಿಂದ ಮುಂದಕ್ಕೆ ಹೊರಟರು. ಈಸಾರಿ ಅವರೆಲ್ಲರೂ ತುಂಬಾ ಎಚ್ಚರ ವಹಿಸಿ ನಡೆಯುತ್ತಿದ್ದರು. ಸ್ವಲ್ಪದೂರ ಹಾಗೇ ಹೋಗಲು ಅವರಿಗೊಂದು ದೊಡ್ಡ ಸರೋವರ ಕಾಣಿಸಿತು.

"ಇದೊಂದು ದೊಡ್ಡ ಸರೋವರದಂತಿದೆ. ಇದನ್ನು ದಾಟುವ ಬಗೆ ಹೇಗೆ?" ಎಂದು ಆಲೋಚನಾಮಗ್ನನಾದ ಸಮರಸೇನ. ಅಷ್ಟರಲ್ಲಿ ಸರೋವರದ ಅಂಚಿನಲ್ಲಿ ಯಾರೋ ಸ್ನಾನ ಮಾಡುತ್ತಿರುವಂತೆ ನೀರು ಚಲಿಸುತ್ತಿರುವುದು ಕಾಣಿಸಿತು. ಅತ್ತ ನೋಡಿದರೆ ಯಾರೂ ಕಾಣಿಸುತ್ತಿಲ್ಲ! ಇದೇನು ಬಂತೋ ಎಂದು ಮತ್ತೆ ಭಯತಲೆಹಾಕಿತು ಎಲ್ಲರಿಗೂ!

ಸರೋವರದ ಮೇಲೆ ಬಾಗಿಕೊಂಡಿರುವ ಕೊಂಬೆ ಕಾಣಿಸುತ್ತಿದೆ. ಆ ಕೊಂಬೆಯಮೇಲೆ ಒಂದು ಉದ್ದನೆಯ ಟೋಪಿ ನೇತಾಡುತ್ತಿದೆ. ಅದಕ್ಕೆ ಮಾನವನ ನೇತ್ರಗಳಂತಿರುವ ಫಳಫಳನೆ ಹೊಳೆಯುವ ರಂಧ್ರಗಳಿವೆ.

ಈ ಚಿತ್ರ ನೋಡಿದ ಸೈನಿಕರು ವಿಸ್ಮಯಗೊಂಡರು. ಸಮರಸೇನನ ಸ್ಥಿತಿಯೂ ಅಷ್ಟೆ. ಆತನಿಗೂ ಅದರಬಗ್ಗೆ ಏನೊಂದು ಹೇಳಲೂ ಆಗಲಿಲ್ಲ. ಸರೋವರದಲ್ಲಿ ನೀರಿನ ಅಲುಗಾಟ ಇನ್ನೂ ಇದೆ. ಯಾರೋ ಕಣ್ಣಿಗೆ ಕಾಣಿಸದ ವ್ಯಕ್ತಿ ಜಲಕವಾಡುತ್ತಿರುವುದು ಮಾತ್ರ ಸ್ಪಷ್ಟವಾಗಿ ತಿಳಿಯುತ್ತಿದೆ.

ಸಮರಸೇನನೂ, ಆತನ ಸಂಗಡಿಗರೂ ಒಂದು ಪೊದೆಯ ಹಿಂದೆ ಅವಿತುಕೊಂಡು ಈ ವಿಚಿತ್ರ ನೋಡುತ್ತಿದ್ದರು. "ಆ ವಕ್ತಿ ಮಾಂತ್ರಿಕ ಏಕಾಕ್ಷಿ ಇರಬಹುದೇನೋ ಎಂಬ ಸಂಶಯವುಂಟಾಯಿತು ಸಮರಸೇನನಿಗೆ.

ಈ ಅನುಮಾನಗಳಿಂದ ಮುಳುಗಿ ತೇಲುತ್ತಿರುವ ಸಮರಸೇನ ಮತ್ತು ಅವನ ಸೈನಿಕರಿಗೆ ಮತ್ತಷ್ಟು ಭಯಾನಕವಾದ ದೃಶ್ಯವು ಕಾಣಿಸಿತು. ಸರೋವರದ ದಡದಲ್ಲಿ, ಪೊದೆಗಳ ಹಿಂದಿನಿಂದ ಒಂದು ನಾಗರ ತನ್ನ ಹೆಡೆಯನ್ನು





ಎತ್ತುತ್ತಿರುವಂತೆ ಕಂಡುಬಂತು. ಅದೊಂದು ವಿಚಿತ್ರಪ್ರಾಣಿ. ಅದರ ಆಕೃತಿ ನೋಡಿದರೆ ಆನೆಯ ನಾಲ್ಕರಷ್ಟಿದೆ. ಅಂತಹ ಪ್ರಾಣಿಗೆ ತಲೆಮಾತ್ರ ತೀರ ಸಣ್ಣದು.

ಏನು ನಡೆಯುವುದೋ ಎಂದು ರೆಪ್ಪೆ ಬಡಿಯದೆ ಎಲ್ಲರೂ ಅದನ್ನೇ ನೋಡುತ್ತಿದ್ದರು. ಅದು ಮೆಲ್ಲನೆ ತನ್ನ ಸಣ್ಣನೆಯ ತಲೆಯನ್ನು ಸರೋವರದೊಳಕ್ಕೆ ಚಾಚಿತು. ಕಣ್ಣಿಗೆ ಕಾಣಿಸದ ವ್ಯಕ್ತಿಯನ್ನು ಹಿಡಿಯಲು ಅದು ಪ್ರಯತ್ನಿಸುತ್ತಿತ್ತೆಂದು ಬೇರೆ ಹೇಳಬೇಕಾಗಿಲ್ಲ.

ಆ ವಿಚಿತ್ರ ಪ್ರಾಣಿಯ ತಲೆ ನೀರಿನ ಮಟ್ಟಕ್ಕೆ ಒಂದು ಅಡಿ ಹತ್ತಿರವಾಗಿ ಬಂದಿತೋ ಇಲ್ಲವೋ ವಿಕೃತವಾದ ಒಂದು ದೊಡ್ಡ ಕೂಗು ಕೇಳಿಸಿತು. ಆ ಕೂಗಾಟವೂ, ಮರದ ಕೊಂಬೆಯಿಂದ ನೇತಾಡುತ್ತಿದ್ದ ಆ ವಿಚಿತ್ರವಾದ ಉದ್ದನೆಯ ಟೋಪಿ ಕೆಳಗೆ ಜಾರುವುದೂ ಒಂದೇಸಾರಿ ಸಂಭವಿಸಿತು.

ಅದೇ ಕ್ಷಣದಲ್ಲಿ ಸರೋವರದಲ್ಲಿ ಒಬ್ಬ ವ್ಯಕ್ತಿ ಆ ಕಣ್ಣಿನ ಟೋಪಿ ಧರಿಸಿಕೊಂಡಿರುವುದು ಕಾಣಿಸಿತು. ಆ ವ್ಯಕ್ತಿ ಕಾಣಿಸಿದ ಕೂಡಲೇ ಆ ವಿಚಿತ್ರಪ್ರಾಣಿ ಭೀತಿಯಿಂದ ನಡುಗುತ್ತಾ ಪಲಾಯನ ಮಾಡಿತು.

"ಓಹೋ, ಮಹೋದರನೇ, ನನ್ನನ್ನೇ ಭಕ್ಷಿಸಲು ನೋಡಿದೆಯಾ? ಚತುರ್ನೇತ್ರನನ್ನು ಭಕ್ಷಿಸುವ ಉದ್ದೇಶವೋ? ಅಹ್ಹಹ್ಹಾ!" ಎಂಬ ಮಾತುಗಳು ಆ ಸರೋವರದಿಂದ ಕೇಳಬಂತು.

ಸಮರಸೇನನೂ ಆತನ ಅನುಚರರೂ ನಡುಗಿಹೋದರು. ಏಕಾಕ್ಷಿ ಮಾಂತ್ರಿಕನ ಕಡುವೈರಿಯಾದ ಈ ಚತುರ್ನೇತ್ರನ ಕಣ್ಣಿಗೆ ಬೀಳದಂತೆ ಹೇಗೆ ತಪ್ಪಿಸಿಕೊಳ್ಳುವುದೋ ಅವರಿಗೆ ಬಗೆಹರಿಯಲಿಲ್ಲ.

ಪ್ರಯಾಣಕ್ಕೆ ಹೊರಟಾಗಲೇ ಮೊತ್ತಮೊದಲು ಕಣ್ಣಿಗೆಬಿದ್ದ 'ಧೂಮಕೇತು' ಈಗೊಮ್ಮೆ ಅವರ ಮನಸ್ಸಿನಲ್ಲಿ ಮಿಂಚಿಹೋಯಿತು. ಅನಂತರ ನಡೆದುದೆಲ್ಲ ಒಂದರ ಮೇಲೊಂದು ಭಯಂಕರ ಪ್ರಸಂಗಗಳೇ. ಮುಂದೇನು ಮಾಡುವುದೆಂದು ಸಮರಸೇನನು ತೀವ್ರಾಲೋಚನೆಗೆ ಗುರಿಯಾದ.

[ ಇನ್ನೂ ಇದೆ ]






# ಪಾಪದ ಫಲ

ಮುಕ್ತವರ್ಮನು ಪರಿಮಳರಾಜ್ಯದ ರಾಜ. ಆತನ ರಾಣಿಯ ಹೆಸರು ಪ್ರೇಮಸುಂದರಿ. ರಾಜರಾಣಿಯರು ಒಂದು ದಿನ ಸಂಜೆ ಪಾದ ಚಾರಿಗಳಾಗಿ ವಿಹಾರಾರ್ಥವಾಗಿ ಹೊರಟರು.

ಬಹಳ ದೂರ ಹೋಗಿ ಒಂದು ಕಡೆ ನಿಂತರು. ಅವರಿಗೆ ಅಲ್ಲೊಂದು ಪಾಳುಬಿದ್ದ ಕೋಟೆ ಕಾಣಿಸಿತು. ಅದರ ಸಮೀಪ ಹೋದರು. ಆಗ ರಾಜನ ಕಾಲುಗಳೆರಡೂ ನೆಲಕ್ಕೆ ಅಂಟಿಕೊಂಡುಬಿಟ್ಟವು. ರಾಣಿ ಒಂದು ಪಂಚವರ್ಣದ ಚೆಲುವಿನ ಗಿಣಿಯಾಗಿ ರೂಪಾಂತರ ಹೊಂದಿದಳು.

ರಾಜನೋ ಮುಂದಕ್ಕೆ ಹೆಜ್ಜೆಯಿಡು ವಂತಿಲ್ಲ. ಆ ಪಂಚವರ್ಣದ ಗಿಣಿ ರಾಜನ ಸುತ್ತಲೂ ಒಂದೇ ಸವನೆ ಹಾರಾಡುತ್ತ ಕೀಚ್ ಕೀಚ್ ಎಂದು ಗೋಳಾಡಲು ಪ್ರಾರಂಭಿಸಿತು.

ಅಷ್ಟರಲ್ಲಿ ಸೂರ್ಯಾಸ್ತಮವಾಯಿತು. ಹುಣ್ಣಿಮೆಯ ಚಂದ್ರನು ಉದಯಿಸಿದ. ಕೋಟೆಯ ಒಳಭಾಗದಿಂದ ವಿಚಿತ್ರಳಾದ ಸ್ತ್ರೀಯೊಬ್ಬಳು ಹೊರಗೆ ಬಂದಳು. ಬಂದ ತಕ್ಷಣ ತನ್ನ ಕೈ ಚಾಚಿ ಗಿಣಿಯನ್ನು ಹಿಡಿದು ಬಿಟ್ಟಳು. ಆಗ ರಾಜನು ಉದ್ವೇಗದಿಂದ "ಯಾರು ನೀನು? ಈ ಮಾಯ ಏನು?" ಎಂದು ಆವೇಶಪೂರಿತನಾಗಿ ಕೂಗಾಡಿದ.

"ಓಹೋ, ನೀನೊ! ಇನ್ನು ನಿನ್ನ ರಾಣಿಯ ಆಶೆಯನ್ನು ಬಿಟ್ಟುಬಿಡು. ನಿನ್ನ ದಾರಿ ನೀನು ನಡೆಯಬಹುದು. ಒಂದು ಮಾತು, ಈ ವಿಷಯ ಯಾರೊಂದಿಗೂ ಹೇಳುವುದಿಲ್ಲ ವೆಂದರೆಮಾತ್ರ ನಿನ್ನನ್ನು ಬಿಡುಗಡೆ ಮಾಡು ತ್ತೇನೆ. ಹಾಗೇನಾದರೂ ಹೇಳಿದೆಯೋ ನಿನ್ನ ತಲೆ ಎರಡು ಹೋಳಾಗಿ ಸಾಯುವೆ. ಹುಷಾರ್" ಎಂದು ಭೀಕರ ಮತ್ತು ವ್ಯಂಗ್ಯ ಧ್ವನಿಯಲ್ಲಿ ನುಡಿದಳು.

ಆಕೆ ತನ್ನ ಕೈಯಲ್ಲಿದ್ದ ಮಾಯಾದಂಡ ದಿಂದ ರಾಜನನ್ನು ತಾಕಿದಕೂಡಲೇ ಆತನ

ಡಿ. ಮಾಧವ, ಕಾಸರಗೋಡು




ಕಾಲುಗಳು ಸಡಿಲವಾಗಿ, ನಡೆದಾಡಲು ಅವಕಾಶವಾಯಿತು. ಆಗ ರಾಜನು "ನನ್ನ ಪ್ರೇಮಸುಂದರಿಯನ್ನು ನನಗೆ ಕೊಟ್ಟ ಹೊರತು ಸುಮ್ಮನಿರಲಾರೆ. ಇಲ್ಲಿಂದ ಹೊರಡುವುದೇ ಇಲ್ಲ" ಎಂದು ಹಠಹಿಡಿದ.

"ಏನು! ಇಷ್ಟೊಂದು ಹಠಮಾಡುವೆಯಾ? ಇರು, ಎಂದು ಹೇಳಿ ಆ ಮಾಂತ್ರಿಕಳು ರಾಜನನ್ನು ಮಾಯಾದಂಡದಿಂದ ಅಲ್ಲೇ ಬಂಧಿಸಿ, ಗಿಣಿಯನ್ನು ತೆಗೆದುಕೊಂಡು ಕೋಟೆಯೊಳಕ್ಕೆ ನಡೆದೇಬಿಟ್ಟಳು.

ಕೋಟೆಯ ಒಳಗಡೆ ದೊಡ್ಡದೊಂದು ಕೋಣೆಯಿದೆ. ಆ ಕೋಣೆಯಲ್ಲಿ ಪಂಜರದಲ್ಲಿ ತೊಂಬತ್ತೊಂಬತ್ತು ಪಂಚವರ್ಣದ ಗಿಣಿಗಳಿದ್ದವು. ಆ ಮಾಂತ್ರಿಕಳು ಮತ್ತೊಮ್ಮೆ ಆ ಗಿಣಿಗಳನ್ನೆಲ್ಲಾ ಲೆಕ್ಕಮಾಡಿದಳು. ಹತ್ತಿರದಲ್ಲಿಯೇ ಇದ್ದ ಒಂದು ತಾಳೆಗರಿಗ್ರಂಥವನ್ನು ತೆಗೆದು "ಅಬ್ಬಾ, ಇಂದಿಗೆ ನನ್ನ ನೇಮ ಮುಗಿಯಿತು. ಇನ್ನೇನು ನನಗೆ ಅಮರತ್ವ ಲಭಿಸುವುದು .... ದೇವೇಂದ್ರಲೋಕ...." ಎಂದು ಆನಂದದಿಂದ ಕುಣಿದಾಡಿದಳು.

ಆತರುವಾಯ ಆಕೆ ಒಳಗೆ ಹೋಗಿ ಒಂದು ಭಾರಿ ಕಡಾಯಿ ಮತ್ತು ಥಳಥಳನೆ ಹೊಳೆಯುವ ಚೂರಿಯೊಂದನ್ನು ತೆಗೆದುಕೊಂಡು ಬಂದಳು. ತಾಳೆಗರಿ ಪುಸ್ತಕವನ್ನು ತೆರೆದು, ಅದರಲ್ಲಿದ್ದ ಮಂತ್ರಗಳನ್ನು ಪಠಿಸುತ್ತ, ಒಂದೊಂದೇ ಗಿಣಿಯ ತಲೆ ಕತ್ತರಿಸಿ, ರಕ್ತವನ್ನು ಆ ಕಡಾಯಿಯಲ್ಲಿ ಸುರಿಯುತ್ತಾ ಬಂದಳು. ಹೀಗೆ ತೊಂಬತ್ತೊಂಬತ್ತು ಗಿಣಿಗಳನ್ನು ಕೊಂದಳು. ಮಾಂತ್ರಿಕಳಿಗೆ ಉತ್ಸಾಹ ಹೆಚ್ಚಾಯಿತು.

ಇನ್ನೊಂದು ಗಿಣಿಯನ್ನು ಕೊಂದುಬಿಟ್ಟರೆ ತನ್ನ ವ್ರತ ಮುಗಿಯುವುದೆಂಬ ಉತ್ಸಾಹದಿಂದ ಮಾಂತ್ರಿಕಳು ತಾನು ಹಿಡಿದಿದ್ದ 'ಪ್ರೇಮಸುಂದರಿ' ಎಂಬ ಗಿಣಿಯೊಂದಿಗೆ ತಮಾಷೆಯಾಗಿ ಮಾತನಾಡುತ್ತಿದ್ದಳು.

ಸಮಯಸಾಧಿಸಿ ಗಿಣಿ ತಟಕ್ಕನೆ ಆಕೆಯ ಕಣ್ಣನ್ನು ಕುಕ್ಕಿತು. ಆ ಬಾಧೆಗೆ ತಾಳಲಾರದೆ ಮಾಂತ್ರಿಕಳು ಕಣ್ಣು ಒರೆಸಿಕೊಳ್ಳುತ್ತಿರುವುದನ್ನು ನೋಡಿ ಎರಡನೇ ಕಣ್ಣನ್ನು ಸಹ ಆ ಗಿಣಿ ಕುಕ್ಕಿಬಿಟ್ಟು ತುರ್ರನೆ ಹಾರಿ ಅದು ರಾಜನ ಹತ್ತಿರ ಬಂದು ಸೇರಿಕೊಂಡಿತು.

“ ಇರು ನಿನಗೆ ಹೇಳ್ತೇನೆ ಪಾಠ” ಎಂದು ಗೊಣಗಿಕೊಳ್ಳುತ್ತಾ, ಮಾಂತ್ರಿಕಳು ಹಾಗೇ ತಡವರಿಸಿಕೊಂಡು ನಡೆಯುತ್ತಿದ್ದಳು. ಆದರೆ ಮೆಟ್ಟಿಲು ಇಳಿಯುವಾಗ ಕಾಲು ಜಾರಿ ಕೆಳಗೆ ಬಿದ್ದು ಮೂರ್ಛೆಹೊಂದಿದಳು. ಅವಳಲ್ಲಿದ್ದ ಮಾಯಾದಂಡ ಕೈಯಿಂದ ಜಾರಿ ದೂರದಲ್ಲಿ ಬಿದ್ದಿತು. ಸ್ವಲ್ಪ ಸಮಯಾನಂತರ ಚೇತರಿಸಿ ಕೊಂಡಳು. ಅಳುತ್ತಾ ಬಿದ್ದುಕೊಂಡಿದ್ದಳು.

* * *

ವಿಹಾರಕ್ಕೆಂದು ಹೋದ ಅರಸ ಮತ್ತು ಅರಸಿ ಎಷ್ಟು ಹೊತ್ತಾದರೂ ಹಿಂತಿರುಗಿ ಬಾರದಿರುವುದನ್ನು ಕಂಡು ಪರಿಮಳದೇಶದ ಮಂತ್ರಿ ನೌಕರರನ್ನು ನಾಲ್ಕು ಮೂಲೆಗಳಿಗೂ ಅಟ್ಟಿ, ತಾನೂ ಸಹ ಹುಡುಕಲು ಹೊರಟ.

ಮಂತ್ರಿ ಮಾಂತ್ರಿಕಳಿದ್ದ ಕೋಟೆಯ ಹತ್ತಿರ ಬಂದ. ಆ ದಾರಿಯಲ್ಲಿ ಯಾರೋ ನಡೆದಾಡುತ್ತಿರುವ ಸುಳಿವನ್ನು ನರಳುತ್ತಿದ್ದ ಮಾಂತ್ರಿಕಳು ತಿಳಿದುಕೊಂಡಳು. ಆತನು ಮಂತ್ರಿಯೆಂದು ತನ್ನ ಮಂತ್ರಶಕ್ತಿಯಿಂದ ಅರಿತಳು. “ಅಪ್ಪಾ, ನಾನೇ ನಿಮ್ಮ ರಾಣಿ, ಪ್ರೇಮಸುಂದರಿ. ಒಬ್ಬ ಮಂತ್ರವಾದಿ ನನ್ನನ್ನು ಈ ಸ್ಥಿತಿಗೆ ಗುರಿಮಾಡಿದ. ನನ್ನ ಹತ್ತಿರಲೇ ಎಲ್ಲೋ ಮಾಯಾದಂಡವಿರಬೇಕು. ನೀನೀಗ ಆ ಕೋಲಿನೊಂದಿಗೆ ಕೋಟೆಯೊಳಕ್ಕೆ ಹೋಗು. ಅಲ್ಲಿ ಒಂದು ಕಡಾಯಿಯಲ್ಲಿ ಕೆಂಪನೆಯ ದ್ರಾವಕವಿದೆ. ಅದನ್ನೊಂದು ಬಟ್ಟಲಿನಲ್ಲಿ ತೆಗೆದುಕೊಂಡು ಬಂದು ನನ್ನ ಬಾಯಲ್ಲಿ




ಸುರಿ. ಆಗ ನಾನು ನಿಜರೂಪ ಪಡೆಯುವೆನು. ಬಳಿಕ ರಾಜನಿರುವ ಸ್ಥಳವನ್ನು ತೋರಿಸುತ್ತೇನೆ” ಎಂದಳು.

ಆಕೆ ಹೇಳಿದಪ್ರಕಾರವೇ ಮಂತ್ರಿ ಮಾಯಾದಂಡ ಹೊಂದಿಗೆ ಒಳಗೆ ಹೋಗಿ ಆ ರಕ್ತವನ್ನು ತಂದು ಆಕೆಯ ಬಾಯಿಗೆ ಸುರಿದ.

ಕೂಡಲೇ ಆಕೆ, ಮರಣವೇದನೆ ಅನುಭವಿಸಿದಳು. “ಅಯ್ಯೋ, ಮೋಸವಾಯಿತು. ತೊಂಬತ್ತೊಂಬತ್ತು ಜನ ಸ್ತ್ರೀಯರನ್ನು ಹತ್ಯೆ ಮಾಡಿದ ಪಾಪ ಈಗ ಸುತ್ತಿ ಕೊಂಡಿತು” ಎಂದು ರೋಧಿಸುತ್ತಾ, ತನ್ನ ಕಥೆಯನ್ನೆಲ್ಲಾ ಮಂತ್ರಿಗೆ ವಿವರವಾಗಿ ಹೇಳಿದಳು :

ಆಕೆ ಒಬ್ಬ ಮಾಂತ್ರಿಕನ ಮಗಳು. ಅವಳ ತಂದೆ ಒಂದು ತಾಳೆಗರಿ ಗ್ರಂಥದಲ್ಲಿ ಕೆಲವು

ಅದ್ಭುತವಾದ ಮಂತ್ರಗಳನ್ನು ಬರೆದಿಟ್ಟು ಸತ್ತುಹೋಗಿದ್ದ.

ಅದರಲ್ಲಿ ಒಂದಾನೊಂದು ಮಂತ್ರವನ್ನು ಒಂದು ಕೋಟಿ ಸಾರಿ ಜಪಮಾಡಿ, ಅದು ಪೂರ್ತಿಯಾದ ತಕ್ಷಣ ನೂರು ಜನ ಸ್ತ್ರೀಯರನ್ನು ಗಿಣಿಗಳನ್ನಾಗಿ ಬದಲಾಯಿಸಿ, ಅವುಗಳ ರಕ್ತವನ್ನು ಕೆಲ ಮಂತ್ರಸಾಮುಗ್ರಿಗಳೊಂದಿಗೆ ಬೆರಸಿ, ತೀರ್ಥವಾಗಿ ತೆಗೆದುಕೊಂಡರೆ ಅಮರತ್ವ ಪಡೆಯಬಹುದು. ಮಾತ್ರವಲ್ಲ ಯಾವ ರೂಪವನ್ನು ಬೇಕಾದರೂ ಹೊಂದಬಹುದು. ಯಾವ ಪುರುಷನನ್ನಾದರೂ ವಶವರ್ತಿ ಮಾಡಿಕೊಳ್ಳಬಹುದು.

ಇಷ್ಟೊಂದು ಆಶೆಗಳಿಂದ ಕೈಕೊಂಡ ಕೆಲಸ ಈಗ ಭಗ್ನವಾಯಿತು. ಹಾಗೆ ಆಗಲು ಎರಡು ಕಾರಣಗಳಿದ್ದವು :

ನೂರನೇ ಗಿಣಿಯಾದ ಪ್ರೇಮಸುಂದರಿ ಆಕೆಯ ಕೈಯಿಂದ ತಪ್ಪಿಸಿಕೊಂಡು ಹೋದದ್ದು ಒಂದು. ಇನ್ನೊಂದು ಆ ಗಿಣಿ ಮಾಂತ್ರಿಕಳ ಕಣ್ಣು ಕುಕ್ಕಿದಾಗ ಆ ಕಡಾಯಿಯಲ್ಲಿದ್ದ ರಕ್ತದೊಂದಿಗೆ ಆ ಮುದುಕಿಯ ಕಣ್ಣಿನ ಕೆಟ್ಟ ರಕ್ತವು ಸೇರಿ, ಆ ತೊಂಬತ್ತೊಂಬತ್ತು ಗಿಣಿಗಳ ಪವಿತ್ರ ರಕ್ತ ವಿಷವಾಯಿತು. ಆದರೆ ಕಣ್ಣು ಕಾಣದೆ ನರಳಾಡುತ್ತಿರುವಾಗ ಆ ಮಾಂತ್ರಿಕಳಿಗೆ ತನ್ನ ರಕ್ತ ಕಡಾಯಿಗೆ ಬಿದ್ದದ್ದು ಗೊತ್ತಾಗಲಿಲ್ಲ.

ಆ ತೊಂಭತೊಂಭತ್ತು ಗಿಣಿಗಳ ರಕ್ತವು ಪವಿತ್ರವಾಗಿರುತ್ತಿದ್ದರೆ, ಅದರ ಸೇವನೆಯಿಂದ ಅಮರತ್ವ ಬಾರದಿದ್ದರೂ ಯೌವನವನ್ನು ಹೊಂದಿ ಇನ್ನೂರು ವರ್ಷ ಬದುಕಬಹುದಿತ್ತು.

ಹೀಗೆ ತನ್ನ ಕಥೆಯನ್ನು ಮಂತ್ರಿಗೆ ತಿಳಿಸಿ, ಮಾಂತ್ರಿಕಳು ತುಸಹೊತ್ತು ವಿಲವಿಲನೆ ಒದ್ದಾಡಿ ಪ್ರಾಣಬಿಟ್ಟಳು.

ತರುವಾಯ ಮಂತ್ರಿ ಹಾಗೇ ಹುಡುಕುತ್ತಿರಲು ನೆಲಕ್ಕೆ ಅಂಟಿಕೊಂಡಿದ್ದ ರಾಜ, ಆತನ ಸುತ್ತಲೂ ಹಾರುತ್ತಿದ್ದ ಪಂಚವರ್ಣದ ಗಿಣಿ ಕಾಣಿಸಿದರು. ಮಂತ್ರಿ ತನ್ನ ಹತ್ತಿರವಿದ್ದ ಮಾಯಾದಂಡದಿಂದ ಅವರನ್ನು ಮುಟ್ಟಲು, ರಾಜ ಮತ್ತು ರಾಣಿ ತಮ್ಮ ಸ್ವಸ್ವರೂಪವನ್ನು ಪಡೆದರು. ಆ ಮೂವರೂ ಸುಖವಾಗಿ ತಮ್ಮ ರಾಜ್ಯವನ್ನು ಸೇರಿಕೊಂಡರು.



# ಹತ್ತರೊಡನೆ ಹನ್ನೊಂದು

ನಮಗೆ ಅನೇಕ ಕೆಲಸಗಳಿರುತ್ತವೆ. ಒಂದು ಕೆಲಸದೊಂದಿಗೆ ಇನ್ನೊಂದು ಕೆಲಸವನ್ನು ತಪ್ಪದೆ ಮಾಡಬೇಕಾಗಿ ಬರುತ್ತದೆ. ಎಷ್ಟೋ ಖರ್ಚುಗಳು. ಅದರೊಂದಿಗೆ ಹೆಚ್ಚಿನ ಖರ್ಚು ಕೂಡಾ. ಇಂತಹ ಸಂದರ್ಭದಲ್ಲಿ ' ಆಗಲಿ, ಹತ್ತರೊಡನೆ ಹನ್ನೊಂದು ' ಎಂಬ ಸಾಮತಿಯನ್ನು ಉಪಯೋಗಿಸುತ್ತೇವೆ. ಈ ಸಾಮತಿ ಹೇಗೆ ಹುಟ್ಟಿತು ಗೊತ್ತೆ ?

ಅಣ್ಣನಾದ ರಾವಣಾಸುರನಿಗೆ ವಿಭೀಷಣನು ಎಷ್ಟೋ ನೀತಿಗಳನ್ನು ಹೇಳಿ ಧರ್ಮೋಪದೇಶ ಮಾಡಿದ. ಇದಾವುದೂ ರಾವಣನ ಕಿವಿಗೆ ಏರಲಿಲ್ಲ. ಆದರೂ ಬಿಡದೆ ವಿಭೀಷಣನು ಬೋಧೆಮಾಡುತ್ತಾ ಇರಲು ರಾವಣನು ಉಗ್ರನಾದ. ಕಡೆಗೆ ಉಪಾಯಗಾಣದೆ 'ಅಣ್ಣಾ ನಿನ್ನ ಕರ್ಮ' ಎಂದು ವಿಭೀಷಣನು ರಾಮನ ಬಳಿಗೆ ಹೋಗಿ ಶರಣಾಗತನಾದ.

ಆಗ ಶ್ರೀರಾಮನ ಸುತ್ತೂ ಅವನ ಪರಿವಾರವೂ ಇತ್ತು. "ವಿಭೀಷಣನ ವಿಷಯ ಏನು ಮಾಡುವ?" ಎಂಬರ್ಥದಲ್ಲಿ ರಾಮನು ಸುತ್ತಲೂ ನೋಡಿದ. ಅಲ್ಲಿನ ಹಿರಿಯರು ಚರ್ಚೆಗೆ ತೊಡಗಿದರು.

"ಇವನು ನಮ್ಮ ಶತ್ರುವಿನ ತಮ್ಮ. ನಮ್ಮೊಂದಿಗೆ ಸೇರಿಸಕೂಡದು. ಕಳಿಸಿಬಿಡಿ" ಎಂದನು ಲಕ್ಷ್ಮಣ.

"ರಾಕ್ಷಸರ ಮಾಯೆಗಳು ಅನೇಕ ವಿಧವಾಗಿವೆ. ಇದು ಚೆನ್ನಾಗಿ ಯೋಚಿಸಬೇಕಾದ ವಿಷಯ. ಅವಸರ ಮಾಡಕೂಡದು" ಎಂದನು ಸುಗ್ರೀವ.

"ನಮ್ಮವನೊಬ್ಬನನ್ನು ಅತ್ತ ಕಳುಹಿಸಿ ನಿಜ ತಿಳಿದುಕೊಂಡು ನಂತರವೇ ನಿಶ್ಚಯಿಸಬೇಕು" ಎಂದ ಇನ್ನೊಬ್ಬ. ಆಗ ಹನುಮಂತ ಹೇಳಿದ: "ರಾಯಭಾರಿಯನ್ನು ಕಳುಹಿಸುವುದಾದರೆ ಅಲ್ಲಿಯ ರಹಸ್ಯವನ್ನರಿಯುವ ಒಳ್ಳೆಯ ಇಂಗಿತಜ್ಞನಾಗಿರಬೇಕು. ಹಿಂದೆ ನಾನು ಸೀತಾದೇವಿಯನ್ನು ಹುಡುಕಲಿಕ್ಕೆಂದು ಹೋದಾಗ ಈ ವಿಭೀಷಣನ ಸಂಗತಿ ಕಂಡು ಹಿಡಿದಿದ್ದೇನೆ. ಈತನು ರಾಕ್ಷಸ ಕುಲದಲ್ಲಿ ತಪ್ಪಿ ಹುಟ್ಟಿದವನು. ನಿಷ್ಕಪಟಿ; ನೀತಿವಂತ. ನಮ್ಮೊಂದಿಗಿಟ್ಟುಕೊಂಡರೆ ಏನೂ ಪ್ರಮಾದ ಬಾರದು. ಒಂದು ವೇಳೆ ಇವನು ದ್ರೋಹಕ್ಕೇ ತಲೆಹಾಕಿದನೆನ್ನೋಣ; ರಾವಣಾಸುರನ ಹತ್ತು ತಲೆಗಳನ್ನೂ ತರಿದುಹಾಕಬಲ್ಲ ನಿಮಗೆ ಈ ವಿಭೀಷಣನ ಒಂದು ತಲೆ ದೊಡ್ಡದೆ? ಆ ಹತ್ತರೊಡನೆ ಇದು ಹನ್ನೊಂದು."

ಶರಣಾಗತ ರಕ್ಷಕನಾದ ಶ್ರೀರಾಮಚಂದ್ರನಿಗೆ ಹನುಮಂತನ ಈ ಯುಕ್ತಿಯುಕ್ತವಾದ ಮಾತು ನೆಚ್ಚಿತು. ಬೇರೆ ಯೋಚನೆ ಮಾಡದೆ ವಿಭೀಷಣನನ್ನು ತನ್ನೊಂದಿಗೆ ಸೇರಿಸಿಕೊಂಡನು. ಅಂದಿನಿಂದ 'ಹತ್ತರೊಡನೆ ಹನ್ನೊಂದು' ಎಂಬ ಸಾಮತಿ ವಾಡಿಕೆಯಾಯಿತು.




ಸುಮಾರು ಎರಡು ಸಾವಿರ ಐನೂರು ವರ್ಷಗಳ ಹಿಂದೆ ಒಂದು ಘೋರಾರಣ್ಯದ ಸಮೀಪದಲ್ಲಿ ಪಾಪಣ್ಣ ಎಂಬ ದಂಪತಿಗಳಿದ್ದರು. ಅವರಿಗೆ ಮಕ್ಕಳಿರಲಿಲ್ಲ. ಆದಕಾರಣ ಸೋಮಣ್ಣ ಎಂಬ ಹುಡುಗನನ್ನು ಸಾಕುತ್ತಿದ್ದರು. ಆ ಹುಡುಗನ ವಯಸ್ಸು ಹನ್ನೆರಡು. ತುಂಬಾ ಒಳ್ಳೆಯವನು. ಅವನೊಬ್ಬ ಅನಾಥ.

ಆ ದಂಪತಿಗಳಿಗೆ ಬಹಳ ವಯಸ್ಸಾಗಿತ್ತು. ಸೋಮಾರಿಗಳು ಬೇರೆ. ಎಲ್ಲಾ ಕೆಲಸವನ್ನೂ ಹುಡುಗನ ತಲೆಗೆ ಕಟ್ಟಿದರು.

ಒಂದು ದಿನ ಆ ಹುಡುಗ ಪಾಪಣ್ಣ ಹೇಳಿದ ಕೆಲಸಗಳೆಲ್ಲವನ್ನೂ ಮುಗಿಸಿ, ವಿಶ್ರಾಂತಿ ಪಡೆಯಲು ಒಂದು ಕಡೆ ಗೋಡೆಗೆ ಒರಗಿಕೊಂಡು ಕುಳಿತಿದ್ದ. ಅಷ್ಟರಲ್ಲಿ ಕಾಲಯಮನಂತೆ ಪಾಪಣ್ಣ ಅಲ್ಲಿಗೆ ಬಂದು "ಎಲವೋ, ಸೋಮಾರಿ, ನಿನಗೆ ವಿಶ್ರಾಂತಿ ಬೇಕೋ? ನಡೆಯೋ ಸೌದೆ ಸೀಳಿಲ್ಲ, ಅಡಿಗೆ ಮಾಡಿಲ್ಲ. ನಿನ್ನನ್ನು ಕೂರಿಸಿ ಕವಳ ಹಾಕಲು ನಮ್ಮಲ್ಲೇನೂ ಬಿಟ್ಟಿಹಣವಿಲ್ಲವಪ್ಪಾ" ಎಂದ.

ಅವನು ಸಿಟ್ಟಿನಿಂದ ಕೆಂಡವಾಗಿ ಕರ್ಕಶ ಸ್ವರದಿಂದ ಬೈದುದನ್ನು ಕೇಳಿ, ಮೊದಲೇ ಬಳಲಿ ಬೆಂಡಾಗಿದ್ದ ಸೋಮಣ್ಣನಿಗೆ ಬೆಂಕಿಯ ಮೇಲೆ ಗುಗ್ಗಳ ಎರಚಿದಂತಾಯಿತು. "ಅಯ್ಯೋ ದೇವರೇ ಇದೆಂತಹ ಯಾತನೆ. ಸಾಕೂ ಸಾಲದ ಅನ್ನ ತಿಂದು ಎಷ್ಟು ಕಾಲ ಕಳೆಯಲಿ?" ಎಂದು ಮನಸ್ಸಿನಲ್ಲೇ ಮರುಗಿದ.

ಕಂಗಾಲಾಗಿದ್ದ ಸೋಮಣ್ಣ ಒಲೆಯಮೇಲೆ ಎಸರಿಟ್ಟು ಕುಳಿತ. "ಇವರ ಕಾಟ ತಪ್ಪಿಸಿಕೊಳ್ಳಬೇಕೆಂದರೆ ಕಾಡಿಗೆ ಓಡಿಹೋಗಬೇಕು" ಎಂದುಕೊಂಡ. ಆಲೋಚನಾ ಮಗ್ನನಾಗಿದ್ದ ಹುಡುಗನಿಗೆ ಅಕಸ್ಮಾತ್ತಾಗಿ ಬೆನ್ನಿನ ಮೇಲೆ ಪೆಟ್ಟೊಂದು ಬಿತ್ತು.

"ಎಲವೋ ಹೆಡ್ಡ, ಎಸರುಕ್ಕಿ, ಒಲೆ ಪಾಲಾಗುತ್ತಿದ್ದರೆ ಸುಮ್ಮನಿರುವೆಯಾ? ಏನೋ ಅದು ಆಲೋಚಿಸುತ್ತಿರುವುದು? ಇರು, ಇರು. ಈ ಹೊತ್ತು ಚೆನ್ನಾಗಿ ಮುಕ್ಕುವಿಯಂತೆ ಊಟ" ಎಂದು ಉಪದ್ರವ ಕೊಡಲು ಪ್ರಾರಂಭಿಸಿದಳು ಪಾಪಮ್ಮ.

ಸರಸ್ವತೀ ಶ್ಯಾಮರಾವು, ಹೈದ್ರಾಬಾದು

ಈ ಬೈಗಳು, ಬಾಸುಂಡೆಗಳನ್ನು ಸಹಿಸಲಾಗಲಿಲ್ಲ ಸೋಮಣ್ಣನಿಗೆ. ಮೊಂಡುತಿರುಗಿದ. ಮನೆಯಿಂದ ಹೊರಬಿದ್ದು ಅಡವಿಯ ಕಡೆ ಓಡಿದ. ಪಾಪಮ್ಮ ಕೂಡಲೇ ಗಂಡನಿಗಾಗಿ ಕೂಗಿಕೊಂಡಳು. ಪಾಪಣ್ಣ ಆಡಾವುಡಿಯಾಗಿ ಬಂದು, ಹುಡುಗನು ಓಡುತ್ತಿರುವುದನ್ನು ನೋಡಿ ಚಕಿತನಾದ.

"ಲೋ, ಸೋಮು! ಕಾಡಿಗೆ ಹೋಗುತ್ತಿರುವೆಯಲ್ಲೋ. ಅಲ್ಲಿ ಕ್ಷಣ ಕಾಲ ಬದುಕಲಾರೆ. ಅಡವಿ ಸುತ್ತಲೂ ಭಾರಿ ಗೋಡೆಯಿದೆ. ಅದನ್ನು ದಾಟಲು ನಿನ್ನಿಂದ ಸಾಧ್ಯವಿಲ್ಲ ಕಣೋ! ಆ ಅರಣ್ಯದ ತುಂಬಾ ಭಯಂಕರವಾದ ಮೃಗಗಳು, ಪೀಡೆ ಪಿಶಾಚಿಗಳೂ ಬಹಳವಾಗಿವೆ" ಎಂದು ಅರಚಿಕೊಂಡ.

ಏನಾದರೂ ವಿರಕ್ತಿ ಹುಟ್ಟಿದ್ದ ಆ ಹುಡುಗನು ಪಾಪಣ್ಣನ ಮಾತುಗಳಿಗೆ ಕಿವಿಕೊಡಲಿಲ್ಲ. 'ಕ್ರೂರ ಮಾನವರಿಗಿಂತ ಆ ಪಿಶಾಚಿಗಳೇ ಮೇಲು!' ಎಂದು ತೋರಿತು ಅವನಿಗೆ. ಅವನು ಹಿಂತಿರುಗಿಸಹಾ ನೋಡಲಿಲ್ಲ. ಅದೇ ಧಾಟಿಯಲ್ಲಿ ಮುನ್ನುಗ್ಗಿದ.

ಸ್ವಲ್ಪ ದೂರ ಓಡಿದನಂತರ ಪಾಪಣ್ಣ ಹೇಳಿದಂತೆ ಬ್ರಹ್ಮಾಂಡವಾದ ಗೋಡೆ ಕಾಡಿನ ಸುತ್ತಲೂ ಇರುವುದು ಕಾಣಿಸಿತು. ಸೋಮಣ್ಣನಿಗೆ ಆಶ್ಚರ್ಯವಾಯಿತು. ಅದನ್ನು ನೋಡುತ್ತಿದ್ದಂತೆಯೇ ಗೋಡೆ ಬಿರುಕುಬಿಟ್ಟು, ಒಬ್ಬ ಮನುಷ್ಯನು ನುಸುಳಿಕೊಂಡು ಹೋಗುವಷ್ಟು ದಾರಿ ಕೊಟ್ಟಿತು.



ಒಳಗೇನಿರುವುದೋ ನೋಡೋಣವೆನ್ನಿಸಿತು ಆ ಹುಡುಗನಿಗೆ. ಆ ದಾರಿ ಮೂಲಕ ಹಾದು ಅಡವಿಯನ್ನು ಪ್ರವೇಶಿಸಿದ. ಅಲ್ಲಿ ಭಾರಿ ಭಾರಿ ಮರಗಳು, ವಿಚಿತ್ರ ಮತ್ತು ವಿವಿಧ ಹೂಗಿಡಬಳ್ಳಿಗಳೂ ಇದ್ದವು. ನಡು ಹಗಲಲ್ಲೇ ಆ ಪ್ರದೇಶವು ಮೋಡಗಳಿಂದ ಕವಿದಂತೆ ಗಾಢಾಂಧಕಾರ ಹರಡಿತ್ತು.

ಮೆಲ್ಲನೆ ಹೆಜ್ಜೆಯಿಡುತ್ತಿದ್ದ ಸೋಮಣ್ಣ. "ನಾನೇನು ಭಯಪಡುವುದಿಲ್ಲ. ಈ ನೆರಳು, ಈ ಕತ್ತಲೆ ನನ್ನನ್ನೇನೂ ಮಾಡಲಾರವು. ಇಲ್ಲಿನ ಕ್ರೂರಮೃಗಗಳು ಮಾತ್ರ ನನ್ನನ್ನೇನು ಮಾಡುತ್ತಿವೆ? ಸರಿ, ನಾನು ಈಗ ಮಾಡಬೇಕಾದುದೇನು?" ಎಂದು ಯೋಚಿಸಿದ. "ಈಗ ನೀನು ಏನು ಮಾಡಬೇಕೆಂದರೆ..."



ಎಂಬ ಕಂಠಸ್ವರ ಸೋಮಣ್ಣನಿಗೆ ಕೇಳಿಸಿತು. "ಏಲೋ, ಅಪ್ಪಾ ನೀನು ನನ್ನ ಬೇರುಗಳ ಮೇಲಿಂದ ಕೆಳಗಿಳಿದು ಹೊರಗೆ ಹೋಗು, ತಿಳಿಯಿತೇ?" ಎಂದಿತು ಮತ್ತೆ ಆ ಧ್ವನಿ.

ಬೆರಗಾಗಿ ಹಿಂದೆ ತಿರುಗಿ ನೋಡಿದ ಸೋಮಣ್ಣ. ಅದೊಂದು ದೊಡ್ಡ ಮರ. "ಯಾರೀಗ ಮಾತನಾಡಿದ್ದು? ನೀನೇ?" ಎಂದು ಕೇಳಿದ ಸೋಮಣ್ಣ, ಆ ಬೇರುಗಳುಳ್ಳ ಮರವನ್ನು ಕುರಿತು.

"ಹೌದು, ಹೈದಾ. ನಾನೇ. ಮೊದಲು ನನ್ನ ಬೆರಳುಗಳಮೇಲಿಂದ ಇಳಿ. ನೀನೇನು ಕಡ ಭಾರವಿರುವೆಯಾ? ಬಹಳ ಹೊತ್ತು ತಾಳಲಾರೆ" ಎಂದಿತು. ಆ ವಿಚಿತ್ರ ವೃಕ್ಷದ ಮಾತನ್ನು ಕೇಳಿ ಹುಡುಗನಿಗೆ ಕೊಂಚ ಧೈರ್ಯವುಂಟಾಯಿತು. 'ನೀನು ಮರವೇ ಆದರೂ ನನ್ನೊಂದಿಗೆ ಪ್ರೀತಿಯಿಂದ ಮಾತನಾಡಿದೆ! ಸರಿ, ನನಗೀಗ ಬಹಳ ಹಸಿವಾಗಿದೆ. ತಿನ್ನಲು ಇಲ್ಲೇನಾದರೂ ಸಿಗುತ್ತದೆಯೇ?" ಎಂದು ಧೈರ್ಯದಿಂದ ಕೇಳಿದ.

"ಅದಕ್ಕೇನಂತೆ!" ಎಂದು ಕೆಲವು ಹಣ್ಣುಗಳನ್ನು ಉದುರಿಸಿತು ಆ ಭಾರಿ ಮರ. ಸೋಮಣ್ಣನಿಗೆ ತುಂಬಾ ಸಂತೋಷವಾಯ್ತು. 'ನೋಡಿದರೆ ನೀನು ಕಲ್ಪವೃಕ್ಷದಂತಿರುವೆ. ಈ ಅಡವಿಯೆಂದರೆ ನನಗೂ ತುಂಬಾ ಹೆದರಿಕೆಯಿತ್ತು. ಈಗ ತುಸ ಧೈರ್ಯ ಬಂತು. ಈ ಸೊಗುಸಾದ ಪ್ರದೇಶ ಕಂಡು ನನಗೆ ತುಂಬಾ ಆನಂದವಾಗಿದೆ" ಎಂದ.

ಇದನ್ನು ಕೇಳಿ ಆ ಮರ ವ್ಯಂಗ್ಯವಾಗಿ ನಕ್ಕು "ಎಲೈ ಮುಗ್ಧಬಾಲಕನೇ, ನೀನೀಗ ಆಹಾರವನ್ನು ತಿನ್ನಬೇಕೆಂದಿರುವೆಯಲ್ಲವೆ? ನಿನ್ನನ್ನೇ ಯಾರಾದರೂ ಈಗ ಸ್ವಹಾಮಾಡುವುದಾದರೆ, ಇದು ಪ್ರಶಸ್ತವಾದ ಸ್ಥಳವೇ ಹೌದು" ಎಂದಿತು.

ಮರ ಆ ರೀತಿ ನುಡಿಯಲು ಸೋಮಣ್ಣ ಥರಥರನೆ ಕಂಪಿಸಿದ. "ಹಾಗಾದರೆ ಎಲೈ ಕಲ್ಪವೃಕ್ಷವೇ, ನೀನು ನನ್ನನ್ನು ನುಂಗುವೆಯಾ?" ಎಂದು ಪೆಚ್ಚುಮೋರೆ ಹಾಕಿದ.

"ನಾನೇನೂ ನಿನ್ನನ್ನು ನುಂಗುವುದಿಲ್ಲ. ನನಗೆ ನರಮಾಂಸವೆಂದರೆ ಸರಿಬೀಳದು" ಎಂದಿತು ಮರ. ಸ್ವಲ್ಪಹೊತ್ತು ಸುಮ್ಮನಿದ್ದು "ಆದರೆ ಆ ದೀರ್ಘನಾಸಿಕಕ್ಕೆ ಮಾತ್ರ ನರ





ಮಾಂಸವೆಂದರೆ ಪ್ರಾಣ. ಇನ್ನೊಂದು ಐದಾರು ನಿಮಿಷಗಳಲ್ಲಿ ಬರಬಹುದು. ಅದಕ್ಕೆ ನೀನು ಆಹಾರವಾಗುವಮೊದಲೇ ನಿನ್ನ ಆಹಾರ ವನ್ನು ಮುಗಿಸಿಬಿಡು" ಎಂದಿತು ಆ ಮರ ನಿಟ್ಟುಸಿರಿಡುತ್ತಾ.

ಆ ಮಾತು ಕೇಳಿ ಸೋಮಣ್ಣ ಭೀತಿ ಯಿಂದ ನಡುಗಿದ. ತಾನು ತಿನ್ನುತ್ತಿದ ಫಲ ಹಾರ ಬಿಟ್ಟುಬಿಟ್ಟು, ಎದ್ದು ನಿಂತು ಹೀಗೆಂದ: "ಆ ದೀರ್ಘನಾಸಿಕ ಇನ್ನೊಂದು ಐದು ನಿಮಿಷಗಳಲ್ಲಿ ಬಂದು ನನ್ನನ್ನು ತಿನ್ನುವತನಕ ನಾನಿಲ್ಲೇ ಕುಳಿತಿರುವೆನೆಂದು ನೆನೆಸಿರು ವೆಯಾ? ಎಲ್ಲಾದರೂ ಓಡಿಹೋಗಿ ಅದರ ಕಣ್ಣಿಗೆ ಕಾಣಿಸದಂತೆ ಅವಿತಿಟ್ಟುಕೊಳ್ಳು ವೆನು" ಹೀಗೆ ಹೇಳಿ ತಕ್ಷಣ ಪಲಾಯನ ಮಾಡಲು ಪ್ರಾರಂಭಿದ.

ಹಾಗೆ ಸೋಮಣ್ಣ ಸ್ವಲ್ಪದೂರ ಓಡಲು ಆ ಪ್ರಾಂತವೆಲ್ಲಾ ಜಳದಿಂದ ಬಿಸಿಯಾಯಿತು.

ಇಂತಹ ಕತ್ತಲೆಯ ಪ್ರದೇಶದಲ್ಲಿ ಎಲ್ಲಿಂದ ಬರುವುದು ಇಷ್ಟೊಂದು ಸೆಕೆ?" ಎಂದು ಕೊಂಡು ಸುತ್ತಲೂ ನೋಡಿದ. ಅಷ್ಟರಲ್ಲಿ ಆತನು ನಿಂತಿದ್ದ ಸ್ಥಳದಲ್ಲಿದ್ದ ಮರ ಕದಲಿ ದಂತಾಯಿ. ಅದು ಈ ರೀತಿ ಹೇಳಿತು :

"ದೀರ್ಘನಾಸಿಕದ ಸಂಗತಿ ನಿನಗೆ ತಿಳಿಯ ದೆಂದು ತೋರುವುದು. ಆ ಭಯಂಕರ ಜಂತು ವಿಗೆ ಹಸಿವಾದರೆ ಸುತ್ತಮುತ್ತಲು ಕೆಲವು ಯೋಜನೆಗಳ ದೂರ ಅದು ಬೆಂಕಿಯನ್ನು ಚಿಮ್ಮುತ್ತದೆ. ಆ ತಾಪಕ್ಕೆ ಭೂಮಿಯೆಲ್ಲಾ ಬೆಂದು ಹೋಗುವುದು. ಗೊತ್ತಾಯಿತೆ? ಅಗೋ, ಅಲ್ಲಿ ಮುಂದಕ್ಕೆ ನೋಡು"

ಸೋಮಣ್ಣ ಕಂಪಿಸುತ್ತಾ ಅತ್ತ ನೋಡಿದ. ಒಂದು ಭಯಂಕರ ಮೃಗವು ಬೆಂಕಿಕಾರುತ್ತ ಆತನಕಡೆ ಓಡಿಬರುತಿತ್ತು. ಸೋಮಣ್ಣ ಕಾಲಿಗೆ ಬುದ್ಧಿ ಹೇಳಿದ. ಆಗ ಆ ಭಯಂಕರ ಮೃಗವು ಹೀಗೆ ಹೇಳಿತು: "ಎಲವೋ ಹೈದಾ, ನೀನು ಓಡಿ ಪ್ರಯೋಜನವಿಲ್ಲ. ಬೇರೆ ಸಮಯದಲ್ಲಾಗಿದ್ದರೆ ನಾನು ನಿನ್ನೊಂದಿಗೆ ಪಂದ್ಯಕ್ಕೆ ಇಳಿಯುತ್ತಿದ್ದೆ. ನನಗೀಗ ಹೊಟ್ಟೆ ಯಲ್ಲಿ ಚುರುಚುರು ಎನ್ನುತ್ತಿದೆ. ಹೇಗೂ ನೀನು ನನ್ನಿಂದ ತಪ್ಪಿಸಿಕೊಳ್ಳಲಾರೆ; ಎಲ್ಲಿ, ಈ ಕಡೆ ನಾಲ್ಕು ಹೆಜ್ಜೆಯಿಡು. ಇಬ್ಬರಿಗೂ ಕಷ್ಟ ಕಡಮೆಯಾಗುತ್ತದೆ."




ಸೋಮಣ್ಣನು ಇನ್ನು ಓಡಿ ಪ್ರಯೋಜನವಿಲ್ಲವೆಂದು ಗ್ರಹಿಸಿದ. ಹೇಗೂ ಸಾವು ತಪ್ಪುವಂತಿಲ್ಲವಾದುದರಿಂದ ಕಣ್ಣು ಮುಚ್ಚಿಕೊಂಡು ನಿಂತುಬಿಟ್ಟರೆ ಸರಿಹೋಗುವುದೆಂದು, ಅಲ್ಲೇ ನಿಂತುಬಿಟ್ಟ. ದೀರ್ಘನಾಸಿಕ ಅವನ ಹತ್ತಿರ ಬಂತು. ನಡುಗುತ್ತಿದ್ದ ಸೋಮಣ್ಣನನ್ನು ನುಂಗಲು ಬಾಯಿ ತೆರೆಯಿತು. ಅಷ್ಟರಲ್ಲಿ ಅದಕ್ಕೆ ಭಾರಿ ಸೀನು ಬಂತು.

"ಅಬ್ಬಾ, ಈ ಹಾಳು ಸೀನುಗಳು. ಸತ್ತು ಹೋಗುತ್ತಿದ್ದೇನೆ. ಹೊತ್ತಿಗೆ ಬಂದಿಷ್ಟು ರುಚಿಯಾದ ಆಹಾರ ತಿನ್ನೋಣವೆಂದರೆ ಈ ಸೀನು ಬರುತ್ತದೆ. ಈ ಶೀತ ನಿವಾರಣೋಪಾಯ ಯಾರಾದರೂ ತಿಳಿಸಿದರೆ ಅವರಿಗೆ ಕೈಮುಗಿದು ನಮಸ್ಕಾರ ಮಾಡಿಯೇನು" ಎಂದಿತು.

ಅದರ ಮಾತನ್ನು ಕೇಳಿ ಸೋಮಣ್ಣನು ತುಸ ಧೈರ್ಯ ತಂದುಕೊಂಡು "ನೀನು ಆಡಿದ ಮಾತು ತಪ್ಪುವುದಿಲ್ಲವೆಂದರೆ ನಿನ್ನ ನೆಗಡಿಯನ್ನು ನಾನು ನಿಮಿಷಮಾತ್ರದಲ್ಲಿ ಹೋಗಲಾಡಿಸುವೆನು" ಎಂದ.

"ಇಲ್ಲ, ನಾನು ಮಾತು ತಪ್ಪಲಾರೆ" ಎಂದಿತು ಆ ಮೃಗ.

"ಈ ಕತ್ತಲೆ ಪ್ರದೇಶವನ್ನು ಬಿಟ್ಟು ನಮ್ಮ ದೇಶಕ್ಕೆ ಬಾ. ನಮ್ಮ ದೇಶದಲ್ಲಿ ಬೇಕಾದಷ್ಟು ಸೂರ್ಯರಶ್ಮಿಯಿದೆ. ನೆಗಡಿಗೆ, ಸೀನಿಗೆ ಅದೇ ಪರಮೌಷಧ."

"ಸೂರ್ಯನು ಯಾರು? ಸೂರ್ಯರಶ್ಮಿ ಎಂದರೇನು?" ಎಂದು ಬೆರಗಾಗಿ ಕೇಳಿತು ಧೀರ್ಘನಾಸಿಕ.

ಆಗ ಸೋಮಣ್ಣ ಅದಕ್ಕೆ ಸೂರ್ಯಕಿರಣಗಳನ್ನು ಕುರಿತು, ಅರಣ್ಯದಾಚೆಯಿರುವ ಆರೋಗ್ಯಕರವಾದ ಪ್ರದೇಶವನ್ನು ಕುರಿತು ಬಹಳ ಚೆನ್ನಾಗಿ ತಿಳಿಯ ಹೇಳಿದ.

ದೀರ್ಘನಾಸಿಕದ ಸಂತೋಷಕ್ಕೆ ಮಿತಿಯಿಲ್ಲದಾಯಿತು. ಸೋಮಣ್ಣ, ಅವನ ಹಿಂದೆ ಆ ದೀರ್ಘನಾಸಿಕ ನಡೆಯತೊಡಗಿದರು. ಸ್ವಲ್ಪದೂರ ನಡೆದ ನಂತರ ಅಡವಿ ಸುತ್ತಲಿದ್ದ ಎತ್ತರವಾದ ಗೋಡೆ ಕಾಣಿಸಿತು. ಸೋಮಣ್ಣನನ್ನು ಪಕ್ಕದಲ್ಲಿರುವಂತೆ ಹೇಳಿ, ದಿರ್ಘನಾಸಿಕವು ಆ ಗೋಡೆಯಮೇಲೆ ತನ್ನ ನಾಸಿಕಾ ರಂಧ್ರಗಳಿಂದ ತೀವ್ರವಾಗಿ ಜ್ವಾಲೆಯನ್ನು ಹೊಮ್ಮಿಸಿತು.

ಗೋಡೆ ಎರಡು ಭಾಗವಾಗಿ ಸೊಗುಸಾದ ದಾರಿ ಏರ್ಪಟ್ಟಿತು. ಸೋಮಣ್ಣ ದೀರ್ಘ ನಾಸಿಕವನ್ನು ಸಂಗಡ ಕರೆದುಕೊಂಡು ಪಾಪಣ್ಣ ದಂಪತಿಗಳ ಬಳಿಗೆ ಹೋದ. ಅಷ್ಟು ದೂರದಲ್ಲಿರುವಾಗಲೇ ಆ ಭೀಕರ ಮೃಗದೊಂದಿಗೆ ಬರುತ್ತಿದ್ದ ಸೋಮಣ್ಣನನ್ನು ಕಂಡು ಅವರು ಕಂಗೆಟ್ಟರು. "ಕ್ಷಮಿಸು, ಸೋಮಣ್ಣ ನಾವು ತುಂಬಾ ಪಶ್ಚಾತ್ತಾಪ ಪಡುತ್ತಿರುವೆವು" ಎಂದು ಶರಣಾಗತರಾದರು.

ಆಗ ಸೋಮಣ್ಣ, "ನೀವು ಹಾಗೆ ಭಾವಿಸಬಾರದು, ನೀವು ಆಗ ಕಠಿನಶಿಕ್ಷೆ ವಿಧಿಸಿದ್ದರಿಂದಲೇ ನನಗೆ ಸ್ಥೈರಣೆ, ಸಾಹಸಗಳು ಬಂದವು. ಅಂದು ನನಗೆ ನಿಜವಾಗಿ ಮನಸ್ಸಿಗೆ ಅಸಮಾಧಾನ ಉಂಟಾಯಿತು. ಆದರೆ ನಾನೀಗ ಜಗತ್ತಿನಲ್ಲೇ ಯಾರಿಗೂ ಹೆದರುವುದಿಲ್ಲ. 'ಬಾಯಿ ಒಳ್ಳೆಯದಾದರೆ ಊರೂ ಒಳ್ಳೆಯದಾಗುತ್ತದೆ' ಎಂಬಂತೆ ನಾವು ಇತರರಿಗೆ ಒಳ್ಳೆಯದನ್ನು ಬಯಸಿದರೆ ಅವರು ನಮಗೆ ಹಿತವನ್ನೇ ಆಶಿಸುವರು ಎಂಬುದನ್ನು ಚೆನ್ನಾಗಿ ಅರಿತಿರುವೆನು!"

"ಆ ಮಹಾರಣ್ಯದಲ್ಲಿ ಒಂದಾನೊಂದು ಮರವು ನನ್ನೊಂದಿಗೆ ಮಾತನಾಡಿ, ತಿಂಡಿ ತಿನಸು ಕೊಟ್ಟು, ಆದರಿಸಿತು. ಪಿಶಾಚಿಗಳ ಗುಂಪಿಗೆ ಸೇರಿ, ನರಮಾಂಸ ತಿನ್ನುವ ಈ ಭೀಕರ ಮೃಗವು ನನ್ನನ್ನು ನಂಬಿ, ನನಗೇನೂ ಅಪಾಯ ಮಾಡದೆ ನನ್ನ ಹಿಂದೆ ಬಂದಿದೆ. ಆದುದರಿಂದ ನೀವು ನನಗಿತ್ತ ಶಿಕ್ಷಣ ನನಗೆ ಒಳಿತನ್ನೇ ಮಾಡಿತು. ಇದಕ್ಕಾಗಿ ನಾನು ನಿಮಗೆ ಋಣಿ" ಎಂದು ತನ್ನ ಕೃತಜ್ಞತೆಯನ್ನು ತೋರಿಸಿದ ಸೋಮಣ್ಣ.

ಅನಂತರ ದೀರ್ಘನಾಸಿಕನನ್ನು ಸೋಮಣ್ಣ ತನ್ನೊಂದಿಗೆ ತಿರುಗಾಡಿಸುತ್ತ ಬಹಳ ಆದರದಿಂದ ಅದನ್ನು ಸಲಹುತ್ತಿದ್ದನು. ಸೂರ್ಯ ಕಿರಣಗಳ ಚಿಕಿತ್ಸೆಯಿಂದ ಅದರ ನೆಗಡಿಯ ತೊಂದರೆ ಶಾಶ್ವತವಾಗಿ ಗುಣಪಡಿಸಿದ.

ಅಂದಿನಿಂದ ಆ ವಿಚಿತ್ರ ಪ್ರಾಣಿ ಸೋಮಣ್ಣನ ಹಿಂದೆಯೇ ಇದ್ದು. ನಾಯಿಯಂತೆ ವಿಶ್ವಾಸ ತೋರತೊಡಗಿತು. ಇದನ್ನು ಕಂಡು ಆ ಮುದಿ ದಂಪತಿಗಳು "ನಮಗಿಂತಲೂ ಪಿಶಾಚಿಯೇ ಮೇಲು" ಎಂದು ಕೊಳ್ಳುತ್ತಿದ್ದರು.



## ಚಿಣ್ಣರಿಗೆ

ಚಿಣ್ಣರೆಲ್ಲ ಕೇಳಿರಣ್ಣ
ಹಿತದ ನುಡಿಯ ನುಡಿವೆನು
ಯೋಗ್ಯರೆನಿಸಿ ಬದುಕಿರಣ್ಣ
ದೇವ ನಿಮ್ಮ ಪೊರೆವನು.
ತನುವು ಮನವು ಸ್ವಚ್ಛವಿರಲಿ
ಮಲಿನರಾಗಬೇಡಿರಿ
ಹಿರಿಯರನ್ನು ಮನ್ನಿಸುತ್ತ
ವಿನಯದಿಂದ ನಡೆಯಿರಿ.
ಪಾಡು ಪಡುವ ದೀನ ಜನರ
ಕಣ್ಣನೀರ ನೊರಸಿರಿ
ಕೇಡು ಬಗೆದ ವೈರಿಯನ್ನು
ಪ್ರೀತಿದೋರಿ ಜಯಿಸಿರಿ.
ಸತ್ಯ ಮಾರ್ಗದಲ್ಲಿ ನಿತ್ಯ
ಕೆಚ್ಚಿನಿಂದ ನಡೆಯಿರಿ
ಕಾಯಕಷ್ಟದಿಂದೆ ಬಾಳಿ
ನಾಡಿಗಾಗಿ ದುಡಿಯಿರಿ.

ಪಿ. ಸೀತಾರಾಮಭಟ್ಟ, ಮಿತ್ತಬೈಲ್

## ಬಣ್ಣದ ಗಿಳಿಯೇ!

ಬಣ್ಣದ ಗಿಳಿಯೇ! ಚಿನ್ನದ ಗಿಳಿಯೇ!
ಎಲ್ಲಿಗೆ ಹೊರಟಿರುವೆ?
ಒಳ್ಳೆಯ ಮಾಗಿದ ಹಣ್ಣನು ನೋಡಲು
ತೋಟಕೆ ಹೊರಟಿರುವೆ.
ಗಿಳಿಯೇ ಮಿರುಗುವ ಬಣ್ಣದ ಗರಿಗಳು
ಬಂತು ನಿನಗೆ ಹೇಗೆ?
ಹಣ್ಣಿನ ರಸವ ಮಾವಿನ ಮಧುವ
ಹೀರಿ ಬಂತು ಹೀಗೆ!

—ಡಿ. ಶ್ಯಾಮ

## ಓ ಅಳಿಲೇ!

ಅಂದವಾದ ಓ! ಸುಂದರ ಅಳಿಲೇ!
ಮುಂದೆ ಬಾರೆಯಾ? ಮೋರೆತೋರೆಯಾ?
ಹಿಂದೆ ರಾಮಗೆ ಸೇವೆ ಮಾಡಿದೆ,
ಇಂದು ಜಗತಿಗೆ ಪಾಠ ನೀಡಿದೆ
ಬಿಳಿಯ ಕೀರ್ತಿಯಾ ಬಿರುದು ಧರಿಸಿದೆ
ಚೆಲುವಿನ ಅಳಿಲೆ! ಬೆದರದೆ ಇರೆಲೇ
ಗೆಲ್ಲಿಂಗೆಲ್ಲಿಗೆ ಹಾರೋದೆಲ್ಲಿಗೆ?
ಹಣ್ಣಾ ಕಿತ್ತು ಹಾಕೋ ಇತ್ತ.
ನಾನೂ ನೀನೂ ತಿನ್ನೋಣಂತೆ!

—"ತಿಮ್ಮ"

## ವಸಂತು ಬಂತು!

ಆಗಸವೆಲ್ಲವು ತಿಳಿಯಿತು ನೋಡಾ!
ಮಲ್ಲಿಗೆ ಸಂಪಿಗೆ ಯರಳಿತು ನೋಡಾ!
ಕೊಳದಲಿ ಹಂಸದ ಕೇಕೆ ಕೇಳುತಿದೆ!
ವಸಂತ ಋತು ಬಂತೆನ್ನುತಿದೆ!
ತರುಗಳ ನಡು ಕೋಗಿಲೆ ಕೂಗುತಿದೆ!
ವಸಂತ ಹರುಷವ ಹಾಡಿ ತೋರುತಿದೆ!
ಗಾನದ ಸವಿಯ ಸವಿಯಿರೆನುತಿದೆ!
ನವ ಚೈತನ್ಯದಿ ಬಾಳಿರೆನುತಿದೆ!
ಸುಮಗಳು ತುಂಬಿಗೆ ಮಧು ನೀಡುತಿವೆ!
ತುಂಬಿ ಹೂವ ಪ್ರೇಮದಿ ಮೈಮರೆತಿದೆ!
ಇಂತಾನಂದದಿ ವಸಂತ ಬಂತು!
ಬಾಳಿಗೆ ಆನಂದೋತ್ಸವ ತಂತು.
ತುಂಬುತ್ಸಾಹದಿ ಕೆಲಸವ ಮಾಡಾ!
ಸುಮ್ಮನೆ ಕಾಲವ ಕೊಲಬೇಡಾ!

—"ಕಾಶನಾಭ"




ಹಿಂದೆ ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲಿಸುತ್ತಿರುವ ಕಾಲದಲ್ಲಿ ಬೋಧಿಸತ್ವನು ಯುವರಾಜನಾಗಿ ಜನ್ಮ ತಾಳಿದನು. ನಾಮಕರಣ ಮಹೋತ್ಸವದಂದು ದೇಶವಿದೇಶಗಳಿಂದ ಜ್ಯೋತಿಷ್ಕರು ಬಂದರು. 'ಈ ಬಾಲಕನು ತುಂಬಾ ಅದೃಷ್ಟವಂತನು. ಸುಗುಣಗಳ ಖಣಿ. ಐದು ಆಯುಧಗಳಿಂದ ಪ್ರಪಂಚವನ್ನೆಲ್ಲಾ ಜಯಿಸಬಲ್ಲ ಪರಾಕ್ರಮಶಾಲಿ. ಜಂಬು ದ್ವೀಪದಲ್ಲೆಲ್ಲಾ ಸಾಟಿಯಿಲ್ಲದ ಪ್ರಭುವಾಗುವನು' ಎಂದು ಹೇಳಿ ಪಂಚಾಯುಧನೆಂದು ನಾಮಕರಣ ಮಾಡಿದರು.

ಬಾಲಕನಿಗೆ ಬುದ್ಧಿ ಬಂದ ಕೂಡಲೇ ಗಾಂಧರ್ವದೇಶದಲ್ಲಿದ್ದ ತಕ್ಷಶಿಲೆಯಲ್ಲಿ ಮಹಾ ಪಂಡಿತರಾದ ಅಧ್ಯಾಪಕರ ಹತ್ತಿರ ಸಮಸ್ತ ವಿದ್ಯೆಗಳನ್ನು ಕಲಿತು ಬರುವಂತೆ ಹೇಳಿ ಗುರುದಕ್ಷಿಣೆಯಾಗಿ ಸಾವಿರ ವರಹಗಳನ್ನು ಮಗನ ಕೈಗೆ ಕೊಟ್ಟ ರಾಜ.

ಆ ಪ್ರಕಾರವೇ ಪಂಚಾಯುಧನು ತಕ್ಷಶಿಲೆಗೆ ಹೋಗಿ, ವಿದ್ಯಾಭ್ಯಾಸ ಮಾಡಿ, ಸಕಲ ವಿದ್ಯಾ ಪಾರಂಗತನಾದನು. ಗುರುಗಳನ್ನು ಬೀಳ್ಕೊಳ್ಳುವ ಮುನ್ನ ಗುರುಗಳು ಶಿಷ್ಯನಿಗೆ ಆಶೀರ್ವಾದ ಮಾಡಿ, ಐದು ಅಸ್ತ್ರಗಳನ್ನು ಪ್ರಸಾದಿಸಿದರು. ಪಂಚಾಯುಧನು ಕಾಶೀ ರಾಜ್ಯಾಭಿಮುಖನಾಗಿ ಹೊರಟ.

ದಾರಿಯಲ್ಲಿ ಒಂದು ಮಹಾರಣ್ಯ ದಾಟಬೇಕಾಗಿ ಬಂತು. ರಾಜಕುಮಾರನು ಹಾಗೆ ಹೋಗುತ್ತಿರವಲ್ಲಿ ಕೆಲವರು ಆತನನ್ನು ನೋಡಿ "ಎಲೈ ಯುವಕನೇ, ಈ ಮಹಾರಣ್ಯದಲ್ಲಿ ರೋಮಾಂಚನೆಂಬ ರಕ್ಕಸನು ವಿಹಾರ ಮಾಡುತ್ತಿರುತ್ತಾನೆ. ಅವನ ಕಣ್ಣಿಗೆ ಬಿದ್ದೆಯೋ ನಿನ್ನ ಕೆಲಸ ಪೂರ್ತಿಯಾದಂತೆಯೇ ಸರಿ. ಆದುದರಿಂದ ಈ ದಾರಿಬಿಟ್ಟು ಬೇರೊಂದು ದಾರಿಯಲ್ಲಿ ಅರಣ್ಯವನ್ನು ದಾಟುವುದು ಉತ್ತಮ" ಎಂದು ಸಲಹೆ ಕೊಟ್ಟರು.

ಪರಾಕ್ರಮಿಯಾದ ಪಂಚಾಯುಧನು ಈ ಮಾತುಗಳನ್ನು ಲಕ್ಷಿಸಲಿಲ್ಲ. ಮುಂದೆ ನಡೆದು ದಟ್ಟಡವಿಯ ಒಳಕ್ಕೆ ನುಗ್ಗಿದ. ಅವರು ಹೇಳಿದಂತೆಯೇ ತಾಳೆಮರದಷ್ಟು ಎತ್ತರದ ರಾಕ್ಷಸ

ಹೆಚ್. ನಾರಾಯಣರಾವು




ರೋಮಾಂಚನು ಇದಿರಿನಲ್ಲೇ ಪ್ರತ್ಯಕ್ಷನಾದ. ಭಾರಿ ತಲೆ, ಚೆಂಬುಗಾತ್ರದ ಕಣ್ಣುಗಳು, ಬಾಯಿಂದ ಆನೆಯ ದಂತದಂತಹ ಎರಡು ದಂತಗಳು, ಮೈತುಂಬಾ ಕರಡಿಗಿರುವಂತೆ ಕೂದಲು, ಬಣ್ಣಬಣ್ಣಗಳಿಂದ ಭಯಂಕರಾಕಾರನಾಗಿ ತೋರುತ್ತಿದ್ದ.

'ಯಾರು ನೀನು? ಎಲ್ಲಿಗೆ ಹೋಗುತ್ತಿರುವೆ? ನಿಲ್ಲು, ನಿಲ್ಲು. ನಿನ್ನನ್ನು ನುಂಗುವೆನು' ಎಂದು ಹೂಂಕರಿಸಿದ ರೋಮಾಂಚ, ರಾಜಕುವರನನ್ನು ಕಂಡು. ಅದಕ್ಕೆ ಪಂಚಾಯುಧನು "ಎಲೈ ರಾಕ್ಷಸರಾಜನೆ, ನಿನ್ನ ವಿಷಯವನ್ನು ಅರಿತೂ ನಾನು ಈ ಅಡವಿಯಲ್ಲಿ ಪ್ರವೇಶಮಾಡಿದೆ. ನೀನು ನನ್ನ ಹತ್ತಿರ ಬರಬೇಡ. ಇದೋ ಈ ಬಾಣದಿಂದ ನಿನ್ನನ್ನು ಕೆಳ ಗುರುಳಿಸುವೆನು. ನೋಡಿಕೊ" ಎಂದು ಬಾಣವನ್ನು ಬಿಟ್ಟ. ಅದು ರಾಕ್ಷಸನು ಧರಿಸಿದ ಕಂಚುಕಕ್ಕೆ ತಗುಲಿತೇ ಹೊರತು ಅವನಿಗೆ ಯಾವ ಅಪಾಯವೂ ಆಗಲಿಲ್ಲ.

ಆಕ್ರೋಷಗೊಂಡು ಪಂಚಾಯುಧನು ಮತ್ತೊಂದು ಬಾಣಬಿಟ್ಟ. ಅದೂಸಹ ಮೊದಲಿನ ಬಾಣದಂತೆಯೇ ಕಂಚುಕಕ್ಕೆ ತಾಗಿ ಕೆಳಗೆಬಿತ್ತು. ಪ್ರಚಂಡ ವೇಗದಿಂದ ರಾಜಪುತ್ರನು ಮತ್ತೆ ಕೆಲವು ಬಾಣಗಳನ್ನು ಸಾಲಾಗಿಬಿಟ್ಟ. ಪ್ರಯೋಜನ ವಿಲ್ಲವಾಯಿತು. ವಿಷಪೂರಿತವಾದ ಐವತ್ತು ಬಾಣಗಳನ್ನು ಬಿಟ್ಟ. ಏನೂ ಲಾಭವಾಗಲಿಲ್ಲ.

ರೋಮಾಂಚನು ತನ್ನ ಮೈ ಮೇಲಿದ್ದ ಕಂಚುಕವನ್ನು ಒಂದುಸಾರಿ ಒದರಿದ. ಇದುವರೆವಿಗೂ ಕಂಚುಕಕ್ಕೆ ನಾಟಿಕೊಂಡಿದ್ದ ಕೆಲವು ಬಾಣಗಳು ಅವನ ಪಾದಗಳ ಹತ್ತಿರ ಬಿದ್ದವು. ಬೋಧಿಸತ್ವನು ತನ್ನ ಖಡ್ಗವನ್ನು ತೆಗೆದುಕೊಂಡು ರಾಕ್ಷಸನ ಮೇಲೆ ಬೀಸಿದ. ಮೂವತ್ತುಮೂರು ಅಂಗುಲ ಉದ್ದವಿದ್ದ ಆ ಭಾರಿ ಖಡ್ಗವೂಸಹ ಬಾಣಗಳಂತೆಯೇ ಕಂಚುಕಕ್ಕೆ ಸಿಕ್ಕಿಕೊಂಡಿತು. ಆ ತರುವಾಯ ರಾಜಕುಮಾರನು ತನ್ನ ಗದೆಯನ್ನು ಅವನ ಮೇಲೆ ಬೀಸಿದ. ಅದೂಸಹ ಅವನ ಕಂಚುಕಕ್ಕೆ ಅಂಟಿಕೊಂಡಿತು. ಇನ್ನೂ ಅನೇಕ ವಿಧವಾದ ಆಯುಧಗಳನ್ನು ಪ್ರಯೋಗಿಸಿದ. ಎಲ್ಲದರಗತಿಯೂ ಅದೇರೀತಿ ಆಯಿತು. ಆಗ ಬೋಧಿಸತ್ವನು "ಎಲೈ ರಾಕ್ಷಸನೆ,

ನಾನು ಯಾರೋ ನಿನಗೆ ತಿಳಿದಂತೆ ತೋರು ತ್ತಿಲ್ಲ. ನನ್ನ ಹೆಸರು ಪಂಚಾಯುಧ. ನಾನು ಈ ಅರಣ್ಯಕ್ಕೆ ಹೊರಡುವಾಗ ನನ್ನ ಆಯುಧ ಗಳಮೇಲೆಯೇ ಅವಲಂಬಿಸಿ ಕೊಂಡು ಬರ ಲಿಲ್ಲ. ನನ್ನ ಸ್ವಶಕ್ತಿಯನ್ನು ನಂಬಿ ಬಂದೆ. ಇನ್ನು ನನ್ನಾಶಕ್ತಿನೋಡು. ಒಂದೇ ಒಂದು ಏಟಿಗೆ ಕುಸಿದು ಬೀಳುವೆ" ಎಂದು ಬಲಗೈ ಮುಷ್ಟಿಯಿಂದ ರೋಮಾಂಚನನ್ನು ಬಲವಾಗಿ ಹೊಡೆದ. ಆ ಕೈ ರಾಕ್ಷಸನ ರೋಮಗಳಲ್ಲಿ ಸಿಕ್ಕಿಕೊಂಡಿತು.

ರಾಜಕುಮಾರನು ಸುಮ್ಮನಿರಲಿಲ್ಲ. ಎಡ ಗೈಯಿಂದಲೂ, ಕಾಲುಗಳಿಂದಲೂ ರಪರಪನೆ ಹೊಡೆದ. ಆ ಕೈ ಮತ್ತು ಕಾಲುಗಳೂಸಹ ರಾಕ್ಷಸನ ರೋಮಗಳಲ್ಲಿ ಸಿಲುಕಿಕೊಂಡವು! ಕೈ ಕಾಲುಗಳಾಡದೆ, ಬೇರೇನೂ ಮಾಡ ಲಾರದೆ ನಿಸ್ಸಹಾಯಕನಾದ ಪಂಚಾಯುಧ. ಆದರೂ ಆತನ ಪೌರುಷಮಾತ್ರ ಕುಗ್ಗಲಿಲ್ಲ. "ಎಲೈ ದುರ್ಮಾರ್ಗನೇ, ನೋಡಿಕೊ" ಎಂದು ಗರ್ಜಿಸುತ್ತ ತಲೆಯಿಂದ ಹೊಡೆಯಲು ಪ್ರಾರಂಭಿಸಿದ. ಪಾಪ, ಆತನ ತಲೆಯೂಸಹ ಆ ರೋಮಾಂಚನ ರೋಮಗಳಿಗೆ ಅಂಟಿ ಕೊಂಡುಬಿಟ್ಟಿತು.

ಆದರೂ ಬೋಧಿಸತ್ವನ ಧೈರ್ಯಸಡಿಲ ವಾಗಲಿಲ್ಲ. ಈ ಬಾಲಕನನ್ನು ಕಂಡು ರೋಮಾಂಚನು "ಇವನು ಯಾರೋ ಸಾಮಾನ್ಯಮಾನವನಲ್ಲ. ಸಿಂಹದ ಮರಿಯಂತೆ ಕಾಣಿಸುತ್ತಾನೆ. ನನ್ನನ್ನು ಎದುರಿಸಲು




ಸಾಹಸಗೊಂಡ ಈ ಬಾಲಕನ ಧೈರ್ಯ ವೆಷ್ಟಿರಬೇಕು" ಎಂದು ಆಶ್ಚರ್ಯಪಟ್ಟು—

"ಎಲೈ ಬಾಲಕನೇ, ಮಾನವರು ನನ್ನ ಸ್ವರೂಪವನ್ನು ಕಂಡಾಕ್ಷಣ ಬೆದರಿ ಓಡುವರು. ಆದರೆ ನಿನಗೆ ಮಾತ್ರ ಪ್ರಾಣಭಯವಿಲ್ಲದಿರಲು ಕಾರಣವೇನು?" ಎಂದು ಕೇಳಿದ.

ಬೋಧಿಸತ್ವನು "ನಾನು ಏಕೆ ಭಯಪಡ ಬೇಕು? ಜನನವು ಮರಣವನ್ನು ಎಳೆದು ಕೊಂಡೇ ಬರುತ್ತದೆ. ಅಷ್ಟೇ ಅಲ್ಲದೆ ನನ್ನ ದೇಹ ದಲ್ಲಿ ವಜ್ರಸದೃಶವಾದ ಖಡ್ಗವೊಂದಿದೆ. ಅದು ಜ್ಞಾನಖಡ್ಗ. ನನ್ನನ್ನು ನೀನು ನುಂಗಿದೆ ಎಂದರೆ ಅದು ನಿನ್ನ ಹೊಟ್ಟೆಯನ್ನು ಹೊಕ್ಕು ನಿನ್ನನ್ನು ಕೊಲ್ಲುವುದು" ಎಂದ ಗಂಭೀರವಾಗಿ. ಈ ಮಾತನ್ನು ಕೇಳಿ ರೋಮಾಂಚನು ತನ್ನೊಳಗೇ

ಹೀಗೆಂದುಕೊಂಡ "ಈ ಬಾಲಕನು ಹೇಳುವ ಮಾತುಗಳಲ್ಲಿ ಸತ್ಯವಡಗಿದೆ. ಇಂತಹ ಶೂರ ಶಿಖಾಮಣಿಯನ್ನು ನುಂಗಿಬಿಡಬಹುದು; ಆದರೆ ಜೀರ್ಣಿಸಿಕೊಳ್ಳುವುದು ಸಾಧ್ಯವಲ್ಲ ವೆಂದು ತೋರುತ್ತದೆ. ಆದುದರಿಂದ ಇವ ನನ್ನು ಬಿಟ್ಟುಬಿಡುವುದೇ ಒಳ್ಳೆಯದು."

ರಾಜಕುಮಾರನೊಂದಿಗೆ ಈ ರೀತಿ ಹೇಳಿದ: "ಬಾಲಕನೇ, ನಾನು ನಿನ್ನನ್ನು ನುಂಗುವು ದಿಲ್ಲ. ನೀನು ಸ್ವೇಚ್ಛೆಯಾಗಿ ಹೋಗಬಹುದು."

"ಎಲೈ ರಾಕ್ಷಸರಾಜನೇ, ಅದಕ್ಕಾಗಿ ಇದೋ ನನ್ನ ವಂದನೆಗಳು. ನನ್ನನ್ನು ಬಂಧನದಿಂದ ಬಿಡುವುದು ಉತ್ರಮವಾದ ಕಾರ್ಯವೇನೋ ಹೌದು. ನಾನು ಹೊರಟು ಬಿಡುವೆನು. ಆದರೆ ನಿನ್ನ ಮಾತೇನು? ಎಷ್ಟೋ ಜನ್ಮಗಳನ್ನೆತ್ತಿ ನೀನೀ ಪಾಪ ಕಾರ್ಯಗಳನ್ನು ಮಾಡುತ್ತ ನಿಕೃಷ್ಟ ಬಾಳನ್ನು ಬಾಳುತ್ತಿರುವೆ. ಅಜ್ಞಾನ ವೆಂಬ ಅಂಧಕಾರದಲ್ಲಿ ಬಿದ್ದು ತೊಳಲಾಡು ತ್ತಿರುವೆ. ಎಷ್ಟು ದಿನಗಳಾದರೂ ನಿನ್ನಗತಿ, ನಿನ್ನಬಾಳು ಇದೇತಾನೇ? ಆದರೆ ನೀನು ಹೀಗೇ ಇರಲು ಸಾಧ್ಯವಿಲ್ಲ. ನಿಷ್ಕಾರಣವಾಗಿ ನೀನು ಮಾನವರನ್ನು ಕೊಂದು ತಿಂದರೆ ನಿನ್ನ ಪಾಪ ಮಿತಿಯಿಲ್ಲದೆ ಬೆಳೆಯುವುದು. ಪಾಪ ಹೆಚ್ಚಿದಷ್ಟೂ ನೀನು ರಾಕ್ಷಸ ಜನ್ಮಗಳನ್ನು ಎತ್ತಿ ನಾನಾ ಯಾತನೆಗಳನ್ನು ಅನುಭವಿಸು ತ್ತಿರುವೆಯೇ ಹೊರತು, ನಿನಗೆಂದಿಗೂ ಮೋಕ್ಷ ಪ್ರಾಪ್ತವಾಗುವುದಿಲ್ಲ. ಆದುದರಿಂದ ನಿನಗೆ ಉತ್ತಮವಾದ ಮಾನವ ಜನ್ಮ ಬೇಕಾದ ಪಕ್ಷಕ್ಕೆ ಪಾಪ ಮಾಡುವುದನ್ನು ಬಿಟ್ಟುಬಿಡು" ಎಂದು ಹಿತವಚನ ನುಡಿದ.

ಅಷ್ಟೇ ಅಲ್ಲ; ಮಾನವರು ಉನ್ನತಿ ಪಡೆ ಯಲು ವಿಧಿಸಿರುವ ಐದು ಸೂತ್ರಗಳನ್ನು ವಿವರಿಸಿ ಹೇಳಿ, ಬೋಧಿಸತ್ವನು ರಾಕ್ಷಸನ ಮನಸ್ಸನ್ನು ಬದಲಾಯಿಸಿದನು.

ಅಂದಿನಿಂದ ರೋಮಾಂಚನು ತನ್ನ ರಾಕ್ಷಸ ಕೃತ್ಯಗಳನ್ನು ತೊರೆದನು. ಪ್ರಜೆಗಳಿಗೆ ಅನು ಕೂಲವಾಗುವಂತಹ ಕಾರ್ಯಗಳಲ್ಲಿ ನಿರತ ನಾಗಿ, ಒಳ್ಳೆಯ ಹೆಸರನ್ನು ಪಡೆದ. ನಂತರ ಆ ಅರಣ್ಯವನ್ನು ಪ್ರವೇಶಿಸಲು ಯಾರೂ ಹೆದರುವುದಿಲ್ಲ. ಅದರ ಬದಲು ರೋಮಾಂಚನ ಆತಿಥ್ಯ ಪಡೆಯಲು ಕಾತುರಪಡುತ್ತಾರೆ.






# ಗುಣಮಣಿ

**ಸು**ಮಾರು ಇನ್ನೂರು ವರ್ಷಗಳ ಹಿಂದೆ 'ನಿಜಗಲ್ಲು' ಎಂಬೊಂದು ರಾಜ್ಯವಿತ್ತು. ಆ ರಾಜ್ಯವನ್ನು ಧೀರವೀರನಾದ ರಾಮನಾಯಕನು ಆಳುತ್ತಿದ್ದನು. ಅವನ ಪತ್ನಿಯ ಹೆಸರು ಲಕುಮವ್ವ. ಮದುವೆಯಾಗಿ ಹತ್ತು ವರ್ಷಗಳಾಗಿ ಹೋದರೂ ಈ ದಂಪತಿಗಳಿಗೆ ಮಕ್ಕಳಾಗಿರಲಿಲ್ಲ. ಎಷ್ಟು ದೇವರಿಗೆ ಹರಿಕೆ ಹೊತ್ತರೂ, ವ್ರತೋಪವಾಸ ದಾನಧರ್ಮಗಳನ್ನು ಮಾಡಿದರೂ ಫಲಬರಲಿಲ್ಲ. ಇದನ್ನು ತಿಳಿದು ಲಕುಮವ್ವ ಪತಿಗೆ ಎರಡನೇ ಮದುವೆ ಮಾಡಿಕೊಳ್ಳುವಂತೆ ಪ್ರೇರೇಪಿಸಿದಳು. ರಾಮನಾಯಕ ಒಪ್ಪಲೇ ಇಲ್ಲ.

ಕಡೆಗೆ ಲಕುಮವ್ವ ಒಂದು ಉಪಾಯ ಮಾಡಿ ತನ್ನ ಸಂಬಂಧಿಕರಲ್ಲಿದ್ದ ಬಲು ಚೆಲುವೆಯೂ, ಸುಗುಣೆಯೂ ಆದ ಗಿರಿಜವ್ವ ಎಂಬ ಹುಡುಗಿಯನ್ನು ತನ್ನ ಜತೆಗೆ ಕರಕೊಂಡು ಬಂದಳು. ಅವಳ ಗುಣ ರೂಪಗಳನ್ನು ರಾಜನ ಮುಂದೆ ಮೆರೆಸಿ, ಪರಿಪರಿಯಾಗಿ ಹೇಳಿಕೊಂಡು ಕೊನೆಗೆ ಗಿರಿಜವ್ವನೊಂದಿಗೆ ಅವನ ಮದುವೆ ಮಾಡಿಸಿಬಿಟ್ಟಳು. ಹೀಗೆ ಮದುವೆಯಾದನಂತರ ಗಿರಿಜವ್ವನ ತಾಯಿಯೂ, ತಮ್ಮ ಕಸ್ತೂರಿ ನಾಯಕನೂ ಅರಮನೆಗೇ ಬಂದು ವಾಸಿಸ ಹತ್ತಿದರು. ಅವಳ ತಾಯಿ ಲಕುಮವ್ವನನ್ನು ಲಕ್ಷಿಸಬಾರದೆಂದು ಮಗಳಿಗೆ ದುರ್ಬೋಧನೆ ಮಾಡಿದಳು. ಆದರೆ ಗಿರಿಜವ್ವ ಕೇಳದೆ "ಇದು ಅವಳ ಮನೆ. ನಾವಿಲ್ಲಿ ಬರಲು ಅವಳೇ ಕಾರಣ. ಅವಳಿಗೆ ಎಷ್ಟು ಕೃತಜ್ಞತೆ ತೋರಿದರೂ ಸಾಲದು" ಎಂದು ತಾಯಿಯ ಬಾಯಿ ಮುಚ್ಚಿಸಿಬಿಟ್ಟಳು.

ಹೀಗೆ ಗಿರಿಜವ್ವ ಅರಮನೆಯ ಬೆಳಕಾಗಿರಲು, ಮುಂದೆ ಒಂದು ವರ್ಷದಮೇಲೆ ಅವಳೊಬ್ಬ ಕುಮಾರನನ್ನು ಹೆತ್ತಳು. ಎಲ್ಲರಿಗೂ ಅತ್ಯಾನಂದವಾಯಿತು.

ಕಸ್ತೂರಿನಾಯಕ ಚಿಕ್ಕಂದಿನಿಂದಲೂ ಪೋಲಿಗಳ ಸಹವಾಸದಿಂದ ಕೆಟ್ಟವ. ಈಗ ಅವನಿಗೆ ರಾಮನಾಯಕನ ಆಸ್ಥಾನದಲ್ಲಿ ದೊಡ್ಡ ಅಧಿಕಾರ ಸಿಕ್ಕಿತ್ತು. ನೆರೆರಾಜ್ಯದ ಅರಸನು ನಿಜಗಲ್ಲನ್ನು ಕಬಳಿಸಲು ಪ್ರಯತ್ನ ಪಡುವು

ಎಚ್. ಸಿದ್ಧಲಿಂಗಪ್ಪ, ಗದಗ




ದನ್ನು ಕಸ್ತೂರಿನಾಯಕನು ಅರಿತನು. ಅವನಿಗೆ ತಾನೇ ನಿಜಗಲ್ಲು ರಾಜನಾಗಬೇಕೆಂಬ ಆಶೆ ಬಂದಿತು. ಆ ಅರಸನೊಡನೆ ಗುಪ್ತ ಒಳಸಂಚು ನಡೆಸಿದ. "ನಾನು ನಿಮಗೆ ಮೂರನೇ ರಾತ್ರಿ ಕೋಟೆ ಬಾಗಿಲು ತೆರೆಯುತ್ತೇನೆ. ನೀವು ರಾಮನಾಯಕನನ್ನು ಸೆರೆ ಹಿಡಿಯಬೇಕು. ನನಗೇ ನಿಜಗಲ್ಲಿನ ಆಧಿಪತ್ಯ ಕೊಡಬೇಕು. ನಿಮಗೆ ಬೇಕಾದಷ್ಟು ಹಣವನ್ನೂ ಕಪ್ಪವನ್ನೂ ಒಪ್ಪಿಸುವೆನು" ಎಂದು ಒಪ್ಪಂದ ಮಾಡಿಕೊಂಡನು.

ರಾಮನಾಯಕನನ್ನು ಪುಸಲಾಯಿಸಿ ಕೋಟೆಯ ಅಧಿಕಾರ ಪಡೆದಿದ್ದ ತಂತ್ರ ಫಲಿಸಿತು. ಆ ಮೂರನೆಯ ರಾತ್ರಿ ಬೆಳಂಝಾಮುದ ವೇಳೆಯಲ್ಲಿ ಇದ್ದಕ್ಕಿದ್ದಂತೆ ಶತ್ರು ಸೈನಿಕರು ಕೋಟೆಯೊಳಗೆ ನುಗ್ಗಿದರು. ಗಡಿಬಿಡಿಯಾದರೂ ಎದೆಗುಂದದೆ ರಾಮನಾಯಕನು ಸ್ವತಃ ಶತ್ರುಗಳಮೇಲೆ ಬಿದ್ದು ಹೋರಾಡಿ ಶತ್ರು ಖಡ್ಗಕ್ಕೆ ಆಹುತಿಯಾದನು. ನಿಜಗಲ್ಲು ಶತ್ರುವಶವಾಯಿತು.

ಆ ವೈರಿ ದಳಪತಿ ಗಿರಿಜವ್ವಳನ್ನು ನೋಡಿದ ಮೇಲೆ ತನ್ನ ಕರಾರನ್ನು ಬದಲಾಯಿಸಿದನು. 'ಗಿರಿಜವ್ವ ತನ್ನನ್ನು ಮದುವೆಯಾಗುವುದಾದರೆ ನಿಜಗಲ್ಲಿನ ಅಧಿಕಾರ ನಿನಗೆ ಕೊಡುವೆ. ಇಲ್ಲದಿದ್ದರಿಲ್ಲ" ಎಂದುಬಿಟ್ಟ. ಕಸ್ತೂರಿನಾಯಕನು ಗಿರಿಜವ್ವನಿಗೆ "ನೀನು ಆ ದಳಪತಿಯನ್ನು ವರಿಸಿಕೊಂಡರೇನೇ ನಾವು ಸುಖವಾಗಿರಬಹುದು. ಒಪ್ಪಿಕೋ" ಎಂದು ಒತ್ತಾಯಿಸಿದ.

"ಸರಿ. ನೀನು ಹೇಳಿದಂತೇ ಆಗಲಿ. ಇಲ್ಲದಿದ್ದರೆ ನಮಗೆ ಸುಖವಿಲ್ಲವಲ್ಲವೇ? ಆದರೆ ಗತಿಸಿದ ರಾಜರ ಅಂತ್ಯಕ್ರಿಯೆಯಾದ ಮೂರು ದಿನಗಳಮೇಲೆ ನಾನೂ ನೀನೂ ಮೆರವಣಿಗೆಯಾಗಬೇಕು. ನಾನೊಂದು ಬದಿಯಿಂದ, ನೀನೊಂದು ಬದಿಯಿಂದ ಮೆರವಣಿಗೆ ಹೊರಟು ಗದ್ದುಗೆ ಬಂಡೆಯಮೇಲೆ ನಾವಿಬ್ಬರೂ ಸಂಧಿಸಬೇಕು. ಅಲ್ಲಿ ನಾನು ವಿಜಯಿಯಾದ ನಿನಗೆ ಆರತಿ ಮಾಡಿ ತಿಲಕವಿಡಬೇಕು" ಎಂದಳು. ಇದಕ್ಕೆ ಒಪ್ಪಲಾಯಿತು.

ಗುಣಮಣಿ ಗಿರಿಜವ್ವನ ಈ ವಿಪರೀತ ಬುದ್ಧಿಯನ್ನು ಕೇಳಿ ಹಿರಿಯರಾಣಿ ಲಕುಮವ್ವ ತುಂಬಾ ದುಃಖಿಸಿದಳು. ತಂಗಿಯನ್ನು ಕರೆದು

ತುಂಬಾ ಬುದ್ಧಿ ಹೇಳಿದಳು. ಆದರೆ ಅವಳು ಅಕ್ಕನ ಬುದ್ಧಿವಾದಗಳನ್ನು ಮೂಕಭಾವದಿಂದ ನಿರಾಕರಿಸಿ ಅತ್ತ ಹೋಗಿಬಿಟ್ಟಳು.

ರಾಮನಾಯಕನ ಉತ್ತರ ಕ್ರಿಯೆಗಳು ಮುಗಿದುವು. ಮೆರವಣಿಗೆ ಹೊರಡುವಕಾಲವು ಸನ್ನಿಹಿತವಾಯಿತು. ಆಗ ಗಿರಿಜವ್ವ ತನ್ನ ಮಗುವನ್ನೆತ್ತಿಕೊಂಡು ಹೋಗಿ ಅಕ್ಕಲಕುಮವ್ವನಿಗೆ ಒಪ್ಪಿಸಿ—"ಅಕ್ಕಾ, ಇನ್ನುಮೇಲೆ ಈ ಮಗುವನ್ನು ಕಾಪಾಡುಭಾರ ಪೂರಾ ನಿಮ್ಮದು. ಇವನ ತಂದೆತಾಯಿ ಎಲ್ಲಾ ನೀವೇ. ನಾನು ನನ್ನ ವಿಧಿಯಂತೆ ಹೊರಟಿದ್ದೇನೆ" ಎಂದು ಹಿಂದಿರುಗಿ ಕೂಡಾ ನೋಡದೆ ಹೊರಟು ಹೋದಳು.

ಅನಂತರ ಮೆರೆವಣಿಗೆ ಪ್ರಾರಂಭವಾಯಿತು. ಊರೊಳಗೆ ಒಂದು ಬದಿಯಿಂದ ಗಿರಿಜವ್ವನೂ, ಮತ್ತೊಂದು ಬದಿಯಿಂದ ಕಸ್ತೂರಿನಾಯಕನೂ ಮೆರೆವಣಿಗೆ ಹೊರಟರು. ಊರ ಜನರೆಲ್ಲಾ ಈ ದೃಶ್ಯವನ್ನು ಕೌತುಕದಿಂದ ನೋಡುತ್ತಿದ್ದರು.

ಊರನಡುವೆ ಉನ್ನತಾಕಾರವಾಗಿ ನಿಂತಿರುವ 'ಗದ್ದುಗೆಬಂಡೆ'ಯಮೇಲೆ ಗಿರಿಜವ್ವನೂ ಕಸ್ತೂರಿನಾಯಕನೂ, ಸಂಧಿಸಿಕೊಂಡರು. ಉಳಿದವರೆಲ್ಲಾ ಕೆಳಗೇ ನಿಂತು ನೋಡುತ್ತಿದ್ದರು. ಆ ಬಂಡೆಯಮೇಲೆ ಗಿರಿಜವ್ವ ತಮ್ಮನಿಗೆ ಆರತಿಯೆತ್ತಿ ತಿಲಕವಿಟ್ಟಳು. ಆಗ ಅವಳ ಮುಖವು ಬಹಳ ಗಂಭೀರವಾಗಿತ್ತು. ನಂತರ ಅವಳು,




"ತಮ್ಮಾ, ಕಸ್ತೂರಿ, ನಿನ್ನ ಬುದ್ಧಿವಂತಿಗೆಯನ್ನು ಎಷ್ಟು ಮೆಚ್ಚಿದರೂ ಸಾಲದು. ನಿನ್ನ ಬುದ್ಧಿವಂತಿಗೆಯಿಂದ ನೀನೂ ಉಚ್ಚಪದವಿಗೇರಿದ್ದಲ್ಲದೆ, ನನಗೂ ಮಹಾ ಸುಖವು ಬರುವಂತೆ ಮಾಡಿದಿ. ಬಡಮನೆ ತನದಲ್ಲಿ ಹುಟ್ಟಿದ ನಾವು ಎಂಥ ಉಚ್ಚಪದವಿಗೇರಿಬಿಟ್ಟೆವೀಗ! ನನ್ನ ಪ್ರಿಯ ತಮ್ಮನಾದ ನಿನ್ನನ್ನು ಬಿಟ್ಟು ಹೋಗುವುದು ಹೇಗೆಂಬುದೇ ನನಗೀಗ ಯೋಚನೆಯಾಗಿದೆ! ನೀನು ಮಾಡಿದ ಮಹಾ ಸತ್ಕಾರ್ಯಗಳನ್ನು ನಾನುಮಾತ್ರವಲ್ಲ, ಯಾರೂ ಮರೆಯುವಂತಿಲ್ಲ. ನಿನ್ನಿಂದ ಅತ್ಯಂತ ಕೀರ್ತಿಶಾಲಿಯಾಗಿದ್ದ ರಾಮನಾಯಕರ ನಾಶವಾಯಿತು! ನೀಚಾ! ನಮ್ಮ ತಂದೆ ತಾಯಿಗೆ ಅಪಕೀರ್ತಿ ಕಾರಕನಾದ ದ್ರೋಹೀ!

ಇನ್ನು ನಾವು ಜೀವಿಸಬಾರದು! ಬಾ!" ಎಂದು ಕಟ್ಟಿಕಡೆಗೆ ಕರ್ಕಶವಾಗಿ ಹೇಳುತ್ತ ಅವನನ್ನೆಳೆದುಕೊಂಡು ಬಂಡೆಯ ಮೇಲಿಂದ ಕೆಳಕ್ಕೆ ಹಾರಿಬಿಟ್ಟಳು!

ಜನರು ಹಾಹಾಕಾರ ಮಾಡಿದರು! ಏನಿದೆ? ಆ ಅಕ್ಕತಮ್ಮಂದಿರು ಸತ್ತುಬಿದ್ದಿದ್ದರು.

ಹೀಗಾಗುವುದೆಂದು ಯಾರಿಗೂ ಕನಸು ಕೂಡ ಕಟ್ಟಿರಲಿಲ್ಲ. ಅದುವರಿಗೂ ಅನೇಕರು ಗಿರಿಜವ್ವನ ವಿಷಯವಾಗಿ ಸಣ್ಣಭಾವನೆ ತಾಳಿದ್ದರು. ಅವಳು ದಳಪತಿಯನ್ನು ವರಿಸಲು ಒಪ್ಪಿದ್ದು ಕೇಳಿ ಲಕುಮವ್ವನಿಗಾದಂತೆ ಅನೇಕರಿಗೆ ಖೇದವಾಗಿತ್ತು. 'ಕಸ್ತೂರಿ ನಾಯಕನೂ ಅವಳೂ ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಅಕ್ಕತಮ್ಮಂದಿರುತಾನೇ; ಅದೇ ಇಬ್ಬರಿಗೂ ಒಂದೇ ಬಗೆಯ ದುರ್ಬುದ್ಧಿ ಹುಟ್ಟಿತು. ಕಸ್ತೂರಿ ಪುರುಷನಾದುದರಿಂದ ಘಾತವನ್ನು ಸ್ವಲ್ಪ ಬಹಿರಂಗವಾಗಿಯೇ ಮಾಡಿದನು. ನೋಡಿದರೆ ಅವನಿಗಿಂತಲೂ ಇವಳ ಕೃತ್ಯವೇ ಹೇಯ' ಎಂದು ಹಲವರು ನೆನೆದಿದ್ದರು. ಪದವಿ, ಅಧಿಕಾರಗಳ ಆಶೆಯಿಂದ ಹೆತ್ತ ಮಗುವಿನ ಮೇಲಿನ ಮಮತೆಯೂ ಇಲ್ಲದೆ ಹೋಯಿತೇ ಎಂದು ಹಲವರು ಮರುಗಿಕೊಂಡಿದ್ದರು. ಆದರೆ ಈಗಲೋ—

ಒಂದೇ ಕೈಯಲ್ಲಿ ಹುಟ್ಟಿದ ಬೆರಳುಗಳು ಒಂದೇ ವಿಧವಾಗಿಲ್ಲವೆಂಬ ಸತ್ಯವನ್ನೇ ಎಲ್ಲರೂ ಕಂಡರು. 'ಕೋಮಲ ಹೆಂಗುಸಾದ ಗಿರಿಜವ್ವ, ನೀಚ ತಮ್ಮನಿಂದಾಗಿ ಎಂತಹ ವೈರಾಗ್ಯ ತಾಳಿದಳು! ಎಂಥ ತ್ಯಾಗ ಮಾಡಿದಳು! ಎಷ್ಟು ಚಾಕಚಕ್ಯತೆಯಿಂದ ಅವನನ್ನು ಬಲಿ ತೆಗೆದುಕೊಂಡಳು!' ಎಂದು ಜನರೆಲ್ಲಾ ಬಾಯಿತುಂಬಾ ಅವಳ ತ್ಯಾಗವನ್ನು ಕುರಿತು ಅನೇಕ ವಿಧವಾಗಿ ಕೊಂಡಾಡಿದರು.

ಗಿರಿಜವ್ವನ ಸುಗುಣಗಳಿಗೆ ಮೆಚ್ಚಿ ನೆರೆ ರಾಜ್ಯದ ನಾಯಕನುಕೂಡ, ಅವಳ ಮಗನಿಗೇ ಪಟ್ಟಾಭಿಷೇಕ ಮಾಡಿ, ಲಕುಮವ್ವನನ್ನು ಸಂರಕ್ಷಕಳನ್ನಾಗಿ ನಿಯಮಿಸಿದನು. ಆಗದ್ದುಗೆ ಬಂಡೆಯೇ ಗುಣಮಣಿಯಾದ ಗಿರಿಜವ್ವಳ ಶಾಶ್ವತವಾದಸ್ಮಾರಕ ಚಿಹ್ನವಾಗಿ ನಿಂತಿತು.






ಬಹಳ ದಿನಗಳ ಕೆಳಗೆ ಕೇರಳ ದೇಶದಲ್ಲಿ ಬ್ರಾಹ್ಮಣನೊಬ್ಬನಿದ್ದನು. ಆತನು ಕಡು ಬಡವ. ಹೆಸರೂ ಊರೂ ಇಲ್ಲದವನು. ಆದರೆ ಮಹಾಭಕ್ತ. ತನ್ನ ಆರಾಧ್ಯ ದೇವರಾದ ವಿಷ್ಣುವಿನ ಅನುಜ್ಞೆಯಂತೆ ಆತನು ಒಂದು ಗ್ರಂಥವನ್ನು ಬರೆದನು. ತಾನು ಬರೆದ ಆ ಗ್ರಂಥವನ್ನು ತೆಗೆದುಕೊಂಡು ಹೋಗಿ ಮಹಾಮಹಾ ಪಂಡಿತರಿಗೂ, ವಿದ್ವಾಂಸರಿಗೂ ತೋರಿಸಿ, ಅವರ ಅಭಿಪ್ರಾಯ ಕೋರಿದನು.

ಪ್ರತಿಯೊಬ್ಬರೂ ಆ ಗ್ರಂಥವನ್ನು ನೋಡಿ "ಇದೇನು ಬರವಣಿಗೆಯಪ್ಪಾ ಬ್ರಹ್ಮಲಿಪಿ? ಇದೆಂತಹ ಭಾಷೆ-ದೇವಭಾಷೆಯೇ" ಎಂದು ಗೇಲಿಮಾಡಿದರು. ಆ ಬ್ರಾಹ್ಮಣನಿಗೆ ಈ ಮಾತುಗಳನ್ನು ಕೇಳಿ ಜೀವನದಲ್ಲಿ ವಿರಕ್ತಿಯುಂಟಾಯಿತು. ಆ ಗ್ರಂಥವನ್ನು ಕಂಕುಳಲ್ಲಿಟ್ಟುಕೊಂಡು ಯಾತ್ರೆಗೆ ಹೊರಟ.

ಕಲವು ದಿನಗಳಾದಮೇಲೆ ಆತನು ಒಂದು ಅರಣ್ಯವನ್ನು ಸೇರಿದ. ಆತನಿಗೆ ಮುಂದಕ್ಕೆ ಹೋಗಲು ಹಾದಿಯೇ ತಿಳಿಯಲಿಲ್ಲ. ನಡೆದು ನಡೆದು ತುಂಬಾ ಸೋತುಹೋಗಿದ್ದ. ಆದ ಕಾರಣ ಒಂದು ಮರದ ನೆರಳಿನಲ್ಲಿ ಅಂಗವಸ್ತ್ರವನ್ನು ಹಾಸಿ, ದೇವರನ್ನು ಸ್ಮರಿಸುತ್ತ ಮಲಗಿಕೊಂಡ. ಮಲಗಿಕೊಂಡನೇ ಹೊರತು ನಿದ್ರೆ ಮಾತ್ರ ಹತ್ತಲಿಲ್ಲ.

ಅರ್ಧರಾತ್ರಿಯಲ್ಲಿ ಒಬ್ಬ ಸನ್ಯಾಸಿ ಕಾಣಿಸಿಕೊಂಡು ಬ್ರಾಹ್ಮಣನಿಗೆ ಕುಶಲಪ್ರಶ್ನೆಗಳನ್ನು ಹಾಕಿದ. ಬ್ರಾಹ್ಮಣನು, ತಾನು ಕಷ್ಟಪಟ್ಟು ಬರೆದಿದ್ದ ಗ್ರಂಥವನ್ನು ಆತನಿಗೆ ತೋರಿಸಿದ.

ಸನ್ಯಾಸಿ ಆತನ ಸ್ಥಿತಿಯನ್ನು ಕೇಳಿ ಮರುಕಗೊಂಡು "ಎಲೈ ವಿಪ್ರನೇ, ಶಿವರಾತ್ರಿಯ ದಿನ ನೀನು ಗೋಕರ್ಣ ಕ್ಷೇತ್ರಕ್ಕೆ ಹೋಗು. ಅಲ್ಲಿ ಪೂರ್ವದಿಕ್ಕಿನಲ್ಲಿ ಒಂದು ಗೋಪುರವಿದೆ. ಅದರ ಹತ್ತಿರ ತುಂಬಾ ಜಾಗರೂಕತೆಯಿಂದ ಕಾದುಕೊಂಡಿದ್ದು ಏನು ನಡೆಯುವುದೋ ನೋಡುತ್ತಿರು. ಆದರೆ ಅಲ್ಲಿ ನಡೆದ ವಿಷಯವನ್ನು ಮಾತ್ರ ಯಾರಿಗೂ ತಿಳಿಸಬಾರದು. ಜೋಕೆ" ಎಂದು ಹೇಳಿ ಅದೃಶ್ಯನಾದ. ಬಳಿಕ ಆ ರೀತಿಯೇ ಬ್ರಾಹ್ಮಣನು ಗೋಕರ್ಣ

ಎಸ್. ಗೋಪಾಲ, ಕೊಪ್ಪ



ಬೇಡ. ಆದರೆ ನೀನು ನನ್ನನ್ನು ಏಕೆ ಆಶ್ರಯಿಸಿದೆ? ಹಾಗೆ ಮಾಡುವಂತೆ ನಿನಗೆ ಯಾರು ಸಲಹೆ ಕೊಟ್ಟರು?" ಎಂದು ಕೇಳಿದ. ಅದಕ್ಕೆ ಆ ಬ್ರಾಹ್ಮಣನು ಇಂತೆಂದ; 'ಮಹಾತ್ಮನೇ, ನಾನು ಆ ವಿಷಯವನ್ನು ಬಯಲುಮಾಡುವುದಿಲ್ಲ ವೆಂದು ಮಾತು ಕೊಟ್ಟಿರುವೆನು. ಆದುದರಿಂದ ನನ್ನನ್ನು ಮನ್ನಿಸಬೇಕು."

ಬ್ರಾಹ್ಮಣನ ಸತ್ಯಸಂಧತೆಗೆ ವೃದ್ಧನು ಮೆಚ್ಚಿ 'ಸರಿ, ಸರಿ, ಆದೆಲ್ಲಾ ನನಗೆ ತಿಳಿದಿದೆ. ನಿನಗೆ ಸಲಹೆಯಿತ್ತಾತನು ಒಬ್ಬ ಗಂಧರ್ವ. ಈ ರೀತಿ ದೇವರಹಸ್ಯವನ್ನು ಹೊರಗೆಡವಿದನಾದುದರಿಂದ ಆತನು ಶಾಪಗ್ರಸ್ತನಾಗಿದ್ದಾನೆ. ಆ ಶಾಪದ ಫಲಿತವಾಗಿ ಆತನು ಭೂಲೋಕದಲ್ಲಿ ಜನಿಸಿ, ಲೋಕೋಪಕಾರಕ್ಕಾಗಿ, ನಿನ್ನ ಗ್ರಂಥಕ್ಕೆ ಆತನೇ ಅಮರತ್ವವನ್ನು ದೊರಕಿಸಿಕೊಡುವನು" ಎಂದು ಹೇಳಿ ಮಾಯವಾದನು. ಆವೃದ್ಧನೇ ವೇದವ್ಯಾಸ. ಆತನೊಂದಿಗಿದ್ದ ಶುನಕಗಳೇ ನಾಲ್ಕು ವೇದಗಳು!

ವೇದವ್ಯಾಸನು ಈ ರೀತಿ ಹೇಳಿಹೋದ ಕೆಲವು ದಿನಗಳಿಗೆಲ್ಲಾ ಆ ಬಡ ಬ್ರಾಹ್ಮಣನು ಮರಣಿಸಿದ. ಆತನ ಹತ್ತಿರವಿದ್ದ ಗ್ರಂಥ ನದಿಯಲ್ಲಿ ಹೊಡೆದುಕೊಂಡು ಹೋಗಿ ಚಂಪಕೇಸರಿ ರಾಜನ ಕೈಗೆ ಸಿಕ್ಕಿತು. ಆ ರಾಜನು ಆ ಗ್ರಂಥವನ್ನು ತಿರುವಿ ಹಾಕಿದ. ಏನೂ ತಿಳಿಯಲಿಲ್ಲ. ಆಸ್ಥಾನ ಪಂಡಿತನಿಗೆ ಆ ಗ್ರಂಥವನ್ನು ಕೊಟ್ಟು ಇಂದಿನಿಂದ ನಲವತ್ತೊಂದು ದಿನಗಳಲ್ಲಿ ಈ ಗ್ರಂಥದಲ್ಲಿ ಅಡಗಿರುವ ವಿಷಯ

ಕ್ಷೇತ್ರವನ್ನು ಸೇರಿಕೊಂಡ. ಪೂರ್ವದಿಕ್ಕಿನ ಗೋಪುರದ ಹತ್ತಿರ ನಿರೀಕ್ಷಿಸುತ್ತಾ ಇರಲು ಸೂರ್ಯಾಸ್ತಮಯವಾಯಿತು. ಆ ವೇಳೆಗೆ ಸರಿಯಾಗಿ ವೃದ್ಧ ಬ್ರಾಹ್ಮಣನು ನಾಲ್ಕು ನಾಯಿಗಳನ್ನು ಸಂಗಡ ಕರೆದುಕೊಂಡು ಬಂದು ಆತನ ಹತ್ತಿರ ನಿಂತುಕೊಂಡ. ಆ ವೃದ್ಧನ ದರ್ಶನವಾದ ಕೂಡಲೇ ಆ ಬಡ ಬ್ರಾಹ್ಮಣನಲ್ಲಿ ಒಂದು ರೀತಿಯ ಚೈತನ್ಯ, ಉತ್ಸಾಹಗಳುಂಟಾದುವು. ಆತನೇ ತನಗೆ ಮುಕ್ತಿ ಮಾರ್ಗವನ್ನು ತೋರಿಸುವ ಮಹಾನುಭಾವನೆಂದು ಭಾವಿಸಿದ. ಸಾಷ್ಟಾಂಗ ನಮಸ್ಕಾರ ಮಾಡಿ, ತನ್ನ ಗ್ರಂಥವನ್ನು ಒಪ್ಪಿಸಿದ.

ವೃದ್ಧನು ಕಿರುನಗೆ ಬೀರುತ್ತಾ "ನೀನು ಕಷ್ಟಪಟ್ಟು ಬರೆದ ಗ್ರಂಥಕ್ಕೆ ಪ್ರಪಂಚದಲ್ಲಿ ತುಂಬಾ ಪ್ರಚಾರ ದೊರೆಯುವುದು. ಹೆದರ

ವನ್ನು ನಮಗೆ ವಿವರಿಸಿ ಹೇಳಬೇಕು. ಇಲ್ಲ, ನಿಮ್ಮ ತಲೆ ತೆಗೆಯಿಸುವೆವು" ಎಂದು ಆಜ್ಞಾಪಿಸಿದ. ಪಂಡಿತನು ಪಾಪ, ಒಳ್ಳೇ ಇಕ್ಕಟ್ಟಿನಲ್ಲಿ ಸಿಲುಕಿಕೊಂಡ.

ಆಗ ಆತನ ಪ್ರಿಯ ಶಿಷ್ಯರಲ್ಲೊಬ್ಬನಾದ ರಾಮಾನುಜನು ಗುರುಗಳು ಚಿಂತಾಮಗ್ನರಾಗಿರುವುದನ್ನು ಕಂಡು ಕಾರಣವೇನೆಂದು ಕೇಳಿದ. ಗುರುಗಳು ಏನು ಮಾಡಿದರೂ ಹೇಳಲೊಲ್ಲರು. ರಾಜನಿತ್ತ ಅವಧಿ ಮುಗಿಯಲು ಒಂದು ದಿನ ಮಾತ್ರವೇ ಇದೆ.

ಬೇರೇನೂ ಮಾರ್ಗವಿಲ್ಲದೆ ಶಿಷ್ಯನಿಗೆ ಎಲ್ಲ ವಿಷಯವನ್ನೂ ಹೇಳಿದರು. ಆಗ ರಾಮಾನುಜನು "ಗುರುಗಳೇ ನೀವೇನೂ ಹೆದರಬೇಡಿ" ಎಂದು ಧೈರ್ಯ ಹೇಳಿದ.

ಆತನ ಕೋರಿಕೆಯಂತೆ ಅಂದು ರಾತ್ರಿಯಲ್ಲಿ ಮಹಾಪೂಜೆ ಮಾಡಲು ಉಚಿತವಾದ ಏರ್ಪಾಡುಗಳಾದುವು.

ಅರ್ಧರಾತ್ರಿ ಸಮಯ, ಪೂಜೆ ನಡೆಯುತ್ತಿದೆ. ಆದರೆ ಕುತೂಹಲದಿಂದಿದ್ದ ಗುರುಗಳು ಶಿಷ್ಯನಿಗೆ ತಿಳಿಯದಂತೆ ಅಟ್ಟದಮೇಲೆ ಅವಿತಿಟ್ಟುಕೊಂಡು, ಅಲ್ಲಿ ನಡೆಯುತ್ತಿರುವುದನ್ನು ವೀಕ್ಷಿಸುತ್ತಿದ್ದರು.

ರಾಮಾನುಜನು ಮಾಡುತಿದ್ದ ಪೂಜಾ ಫಲವಾಗಿ ಆರುಜನ ದಿವ್ಯಪುರುಷರು ಪ್ರತ್ಯಕ್ಷರಾಗಿ ಬಂದು, ಪೂಜಾಮಂದಿರದಲ್ಲಿ ಕುಳಿತು, ಮಹಾಗ್ರಂಥವನ್ನು ಬರೆಯುತ್ತಿದ್ದಾರೆ.



ಈ ದೃಶ್ಯವನ್ನು ಕಂಡು ಬೆರಗಾದ ಗುರುಗಳು ಎಚ್ಚರತಪ್ಪಿ, ಅಟ್ಟದಮೇಲಿಂದ ಕೆಳಕ್ಕೆ ಬಿದ್ದುಬಿಟ್ಟರು. ಅವರ ಅವಸ್ಥೆ ನೋಡಿ ರಾಮಾನು "ಅಯ್ಯೋ, ಎಂತಹ ಕೆಲಸ ಮಾಡಿದಿರಿ ಗುರುಗಳೇ!" ಎಂದು ನೊಂದುಕೊಂಡು ಕೂಡಲೇ ಅವರಿಗೆ ಉಚಿತ ಉಪಚಾರಮಾಡಿ, ಗಾಯಗಳನ್ನು ಗುಣಪಡಿಸಿದನು.

ರಾಜನು ಕೊಟ್ಟ ಅವಧಿ ಮುಗಿಯುವ ಮೊದಲೇ ಆ ಗ್ರಂಥ ಸುಂದರವಾದ ಬರವಣಿಗೆಯಲ್ಲಿ ಸಿದ್ಧವಾಯಿತು. ಅದನ್ನು ಕಂಡು ರಾಜನು ಸಂಪ್ರೀತನಾಗಿ ಆ ಪಂಡಿತನಿಗೆ ಭಾರಿ ಸನ್ಮಾನ ಮಾಡಿದನು. ಈ ಮಹಾಗ್ರಂಥವೇ ಮಲೆಯಾಳ ದೇಶದಲ್ಲಿ ಬಹಳ ಪ್ರಚಾರದಲ್ಲಿರುವ "ಅಧ್ಯಾತ್ಮ ರಾಮಾಯಣ" ರಾಮಾನುಜನೇ ಶಾಪಗ್ರಸ್ತನಾದ ಗಂಧರ್ವ!




# ಸುಂಕದವೆಂಕ

ಕಿಟ್ಟುವೂ ನೆರೆಮನೆ ರಾಜನೂ, ಕರೆಮನೆ ಗೋಪುವೂ ನಮ್ಮ ತಾತನ ಬಳಿಗೆ ಬಂದು 'ಕತೆ ಹೇಳಿ ಕತೆ ಹೇಳಿ' ಎಂದು ಕಾಡುತ್ತಿದ್ದರು. ತಾತನೂ ಕಾಟವನ್ನು ಆಟವಾಗಿಸಿಕೊಂಡು ಕತೆ ಹೇಳುತಿದ್ದ. ತಾತ ಯಾವ ಕತೆ ಹೇಳಲೆಂದು ಯೋಚನೆ ಮಾಡುತ್ತಿದ್ದಾಗ ಕಿಟ್ಟು 'ಮಂಕುವೆಂಕನ ಕತೆ ಹೇಳಿ' ಅಂದ.

"ಹಾ! ಸುಂಕದ ವೆಂಕನ ಕತೆ ಹೇಳ್ತೀನೆ ಕೇಳಿ" ಎಂದು ತಾತ ಪ್ರಾರಂಭಿಸಿದರು:

"ಅನೇಕ ವರ್ಷಗಳ ಹಿಂದೆ ಸುಂಕದ ಪದ್ಧತಿಯೇ ಗೊತ್ತಿರಲಿಲ್ಲ. ಆಗ ವೆಂಕುವೆಂಬೊಬ್ಬ ಸೋಮಾರಿ ಕಮ್ಮಾರನಿದ್ದ. ಅವನು ಸೋಮಾರಿಯಾದರೂ ಬುದ್ಧಿವಂತನೇ. ಉಪಾಯವಾಗಿ ದುಡ್ಡು ಗಳಿಸುವ ಯೋಚನೆ ಮಾಡಿದ. ಪಕ್ಕದ ಊರು ರಾಮದೇವಾಲಯದಿಂದ ಪ್ರಸಿದ್ಧವಾಗಿತ್ತು. ಯಾವಾಗಲೂ ಯಾತ್ರಿಕರು ಬರುತ್ತಿದ್ದರು. ಆ ಊರಿನೊಳಗೆ ಹೋಗಲು ಒಂದು ದೊಡ್ಡ ಹೆಬ್ಬಾಗಿಲು ಇತ್ತು. ಈ ವೆಂಕು ಹೆಬ್ಬಾಗಿಲ ಕಂಬಗಳಿಗೆ ಹಿತ್ತಾಳೆಯ ತಗಡನ್ನು ಬಡೆದು ಅದರಬಳಿ ಆಸನ ಹಾಕಿಕೊಂಡು ಒಳ್ಳೇ ಜಬರದಸ್ತಿಂದ ಕುಳಿತ. 'ಪಿತ್ತಲ್‌ಕಾ ದರ್ವಾಜಾ' ಎಂಬ ಮುದ್ರೆಯನ್ನೂ ತಯಾರಿಸಿಕೊಂಡಿದ್ದ. ಅಲ್ಲಿ ಅವನ ಕೆಲಸವೇನೆಂದರೆ: ಒಳಗೆ ಬರುವ ಗಾಡಿ ಮೊದಲಾದ ವಾಹನಗಳಿಗೆ ಆ ಮುದ್ರೆಯೊತ್ತಿ ಕಾಲು ವರಹಾ ಸುಂಕ ಪಡಕೊಂಡು ಒಳಗೆ ಬಿಡುತಿದ್ದ. ವಾಹನಗಳು ಬಂದಕೂಡಲೇ ಅವನು ದರ್ಪದಿಂದ ಅಡ್ಡನಿಂತು ಮುದ್ರೆ ತೋರಿಸಿ ನಿಯಮ ಹೇಳುತ್ತಲೇ 'ಇದು ರಾಜರೇ ನಿಯಮಿಸಿದ್ದಾಗಿರಬೇಕು' ಎಂದೇ ನಂಬಿ ಸುಂಕತೆತ್ತು ಮುದ್ರೆ ಪಡೆದು ಹೋಗುತ್ತಿದ್ದರು. ಹೀಗೆ ಆ ವೆಂಕೂನ ಜೀವನ ಸುಖವಾಗಿ ಸಾಗುತಿತ್ತು.

ಹೀಗಿರುವಾಗ ಒಂದುಸಾರಿ ಅಲ್ಲಿಗೆ ಮಂತ್ರಿಗಳ ಗಾಡಿ ಬಂತು. ವೆಂಕು ಆ ಗಾಡಿಯನ್ನು ನಿಲ್ಲಿಸಿ 'ಕೊಡಿ ಸುಂಕ ಕಾಲು ವರಹಾ' ಎಂದು ಮುದ್ರೆ ತೋರಿಸಿದ. ಮಂತ್ರಿ ಆಶ್ಚರ್ಯದಿಂದ ಆ ಮುದ್ರೆಯನ್ನು ಪರೀಕ್ಷಿಸಿ, ಹಿತ್ತಾಳೆಯ ಹೆಬ್ಬಾಗಿಲ ಕಂಬಗಳನ್ನು ನೋಡಿ, "ಪಿತ್ತಲ್‌ಕಾ ದರ್ವಾಜಾ" ಎಂದು ಗುಣುಗುಣಿಸಿಕೊಂಡು ತಲೆ ಕೆರೆದುಕೊಳ್ಳುತ್ತಾ ಯೋಚಿಸಿ, 'ನಮ್ಮ ರಾಜರೇ ನಿಯಮಿಸಿರಬೇಕು ಈ ವಿಧಿ' ಎಂದುಕೊಂಡು ಸುಂಕತೆತ್ತು ತನ್ನದಾರಿ ಹಿಡಿದು ಮುಂದೆ ಹೋದ.

ಎಂ. ಎಚ್. ಶಂಕರನಾರಾಯಣ, ಬೆಂಗಳೂರು

ಸ್ವಲ್ಪ ದಿವಸಗಳ ನಂತರ ರಾಜರೇ ಇಲ್ಲಿಗೆ ದಯಮಾಡಿಸಿದರು. ವೆಂಕು ಸ್ವಲ್ಪವೂ ಹೆದರದೆ ದಿಟ್ಟತನದಿಂದ ಹೋಗಿ ಗಾಡಿ ನಿಲ್ಲಿಸಿ "ಮಹಾರಾಜರಾಜ್ಞೆ" ಎಂದು ಆ ಗಾಡಿಗೆ "ಪಿತ್ತಲ್ ಕಾ ದರ್ವಾಜಾ"ದ ಮುದ್ರೆಯೊತ್ತಿ "ಕೊಡಿ ಕಾಲು ವರಹಾ" ಎಂದ. ತನ್ನ ಆಜ್ಞೆಯೇ ಇರಬಹುದೆಂದುಕೊಂಡು ರಾಜನೂ ಸುಂಕತೆತ್ತು ಒಳಗೆ ಹೋದ.

ಮತ್ತೆ ಸ್ವಲ್ಪ ದಿನಗಳಾದ ಮೇಲೆ ರಾಜ ಮಂತ್ರಿ ಇಬ್ಬರೂ ಮಾತಾಡುತ್ತಿರುವಾಗ ರಾಜ- "ನಾವು ನಿಯೋಜಿಸಿದ ಆ ಪಿತ್ತಲ್‌ಕಾ ದರ್ವಾಜಾದವ ಬಹಳ ಚುರುಕಾಗಿದ್ದಾನಲ್ಲವೆ?" ಎಂದ.

ಮಂತ್ರಿಗೆ ಏನು ಹೇಳಲೂ ತೋರದೆ "ಹೌದು ಹೌದು. ನಮ್ಮ ರಾಜ್ಯದಲ್ಲಿಯೇ ಹೊಸದಾಗಿ ಹುಟ್ಟಿದ ಈ ಯೋಚನೆ ಇದುವರೆಗೆ ಮತ್ತಾರಿಗೂ ಹುಟ್ಟಿಲ್ಲ. ಹೌದು, ಆದರೆ ಅವನು ನಮಗೆ ಸರಿಯಾಗಿ ಲೆಕ್ಕ ಒಪ್ಪಿಸಲಿಲ್ಲವಲ್ಲಾ!" ಎಂದ. "ವಿಚಾರಿಸಬೇಕು. ಅವನಿಗೆ ಸಂಬಳ ಕೊಡುವುದನ್ನು ಕೋಶಾಧಿಕಾರಿ ಮರೆತ ಹಾಗಿದೆ. ಅವನ ಕರೆಸಿ ವಿಚಾರಿಸಿ" ಎಂದು ರಾಜ ಆಜ್ಞೆಮಾಡಿದ.

ವೆಂಕನನ್ನು ಕರೆದುಕೊಂಡು ಬರುವಂತೆ ರಾಜಭಟರನ್ನು ಕಳುಹಿಸಿದರು. ವೆಂಕನೇನೂ ಮಂಕನಲ್ಲತಾನೇ?

ರಾಜನ ಕರೆಯನ್ನು ಕೇಳಿ ವೆಂಕನು ಹಣದ ಮೂಟೆಯೊಂದಿಗೆ ರಾಜಭಟರೊಡನೆ ಬಂದು ರಾಜನ ಬಳಿ ಅದನ್ನರ್ಪಿಸಿ—"ನನ್ನದು ಸರ್ವಾಪರಾಧ. ಕ್ಷಮಿಸಬೇಕು. ಜೀವನಕ್ಕೆ ಉಪಾಯವಿಲ್ಲದೆ ಹೀಗೆ ಮಾಡಿದೆ. ಪ್ರತಿ ಕಾಸಿಗೂ ಲೆಕ್ಕ ಇಟ್ಟಿದ್ದೇನೆ ಮಹಾ ಪ್ರಭುಗಳು ಸ್ವೀಕರಿಸಿ ನನ್ನನ್ನು ಕಾಪಾಡಬೇಕು" ಎಂದ ಚಾತುರ್ಯದಿಂದ.

ಸುಂಕದ ಹೊಸ ಯೋಚನೆ ಹುಟ್ಟಿಸಿದ ವೆಂಕೂನ ಮೇಲೆ ರಾಜನು ಸಹಾನುಭೂತಿ ತಾಳಿದ. ಅಲ್ಲದೆ ಅವನನ್ನು ಸುಂಕಾಧಿಕಾರಿಯಾಗಿ ನೇಮಿಸಿ ಯೋಗ್ಯ ಸಂಬಳವನ್ನೂ ಗೊತ್ತು ಮಾಡಿದ. ಹೀಗೆ ಸುಂಕದವೆಂಕನಿಂದಾಗಿ ಸುಂಕ ವಾಡಿಕೆಗೆ ಬಂತು"— ಎಂದು ತಾತ ಕಥೆ ಮುಗಿಸಿದ.



# ರತ್ನಗೋಳ (ಹಿಂಬದಿಯ ಚಿತ್ರಕಥೆ-೧)

ಅನೇಕ ಸಾವಿರ ವರ್ಷಗಳ ಹಿಂದೆ ಜಾಪಾನುದೇಶದಲ್ಲಿ ಟೋಜೋ ಎಂಬೊಬ್ಬ ಧನವಂತನಿದ್ದ. ಅವನು ಕೋಟೀಶ್ವರನಾಗಿದ್ದನೆಂದರೂ ಆಶ್ಚರ್ಯವಿಲ್ಲ. ಅವನಿಗೆ 'ಹಿಟ್ಸೊ' ಎಂಬ ಮಗಳೊಬ್ಬಳಿದ್ದಳು. ಬಹಳ ಸುಂದರಿ. ಅವಳಷ್ಟು ಸುಂದರಿಯಾದ ಹುಡುಗಿ ಆ ಪ್ರಾಂತದಲ್ಲಿ ಬೇರೆಯಾರೂ ಇರಲಿಲ್ಲ. ಹಾಗೆಯೇ ಅತ್ಯಂತ ದೈವಭಕ್ತೆ.

ಟೋಜೋ ತನ್ನ ಮಗಳನ್ನು ಒಬ್ಬ ಚಕ್ರವರ್ತಿಗೆ ಕೊಟ್ಟು ಮಹಾರಾಣಿಯನ್ನಾಗಿ ಮಾಡಬೇಕೆಂದು ಬಯಸಿದ. ಹಿಟ್ಸೊಗೂ ಯುಕ್ತವಯಸ್ಸು ಬಂದಿತು. ತನ್ನ ಈಡುಜೋಡಿನವರಿಗೆಲ್ಲಾ ಮದುವೆಯಾಗಿಹೋಗುವುದನ್ನು ನೋಡುವಾಗ, ತನಗೂ ಮದುವೆಯಾಗಬೇಕೆಂಬ ಆಶೆ ಅವಳಿಗೆ ಹುಟ್ಟಿತು.

ಒಂದಾನೊಂದು ದಿನ ಟೋಜೋನ ಭವನಕ್ಕೆ ಯಾರಾರೋ ಮಹನೀಯರು ಬರುವಂತೆ ಶಬ್ದ ಕೇಳಿತು. ಅದನ್ನು ಕೇಳಿ ಹಿಟ್ಸೊ ತನ್ನ ಪರಿಚಾರಿಕೆಯರನ್ನು ಕರೆದು "ಏನದು ಶಬ್ದ?" ಎಂದು ಕೇಳಿದಳು.

ಆಗಲೇ 'ಚೀನಾದೇಶದ ಚಕ್ರವರ್ತಿಯನ್ನು ನೋಡಲು ಹಿಟ್ಸೊ ಬರಲಿ' ಎಂದು ಅವಳ ತಂದೆ ಕರೆಕಳಿಸಿದನು. ಹಿಟ್ಸೊ ತಂದೆಯ ಆಜ್ಞೆಯಮೇರೆಗೆ ಲಜ್ಜೆಯಿಂದ ಸಾಗಿ ಬಂದು ಚಕ್ರವರ್ತಿಯ ಎದುರಿನಲ್ಲಿ ನಿಂತಳು.

ನಂತರ ಟೋಜೋ ಮಗಳಿಗೆ ಚಕ್ರವರ್ತಿಯ ಭೋಗಭಾಗ್ಯಾದಿಗಳನ್ನು ಕುರಿತು ತಿಳಿಯಹೇಳಿ, 'ಇವರು ನಿನ್ನನ್ನು ಮದುವೆಮಾಡಿಕೊಳ್ಳಬೇಕೆನ್ನುತ್ತಾರೆ' ಎಂದ. ಅದಕ್ಕೆ ಹಿಟ್ಸೊ "ನನ್ನ ದೇವಿಗೆ ಕೊಡಲು ತಕ್ಕ ದೊಡ್ಡ ಕಾಣಿಕೆ ಆ ದೇಶದಲ್ಲಿವೆಯೇ?" ಎಂದು ಕೇಳಿದಳು. "ಎಲ್ಲಾ ಇವೆ. ನೀನು ಈವರೆಗೆ ಕಾಣದ ವಿಶೇಷ ವಸ್ತುಗಳೆಲ್ಲಾ ಅಲ್ಲಿವೆ" ಎಂದ ಟೋಜೋ.

ಅನಂತರ ಮದುವೆಯ ಏರ್ಪಾಡು ಜರುಗಿತು. ಹಿಟ್ಸೊ ತನ್ನ ಇಷ್ಟದೈವವಾದ ದೇವಿಯ ಆಲಯಕ್ಕೆ ಹೋಗಿ "ನಾನು ಚೀನಾರಾಣಿಯಾದರೆ ನಿನಗೆ ದೊಡ್ಡ ಕಾಣಿಕೆ ಕೊಡುವೆ" ಎಂದು ಹರಕೆ ಹೇಳಿಕೊಂಡಳು.

ಮದುವೆಯಾಯಿತು. ಹೊಸದಂಪತಿಗಳು ಚೀನಾಕ್ಕೆ ಸೇರಿದರು.

ಅಲ್ಲಿಯ ರಾಜಕೋಟೆಯೊಳಗಿನ ಬಂಗಾರದ ಬೀದಿಯಲ್ಲಿ ಚಕ್ರವರ್ತಿ ಹಿಟ್ಸೊವನ್ನು ನಡೆಸಿದನು. ಅಲ್ಲಿಯ ನಂದನವನದಲ್ಲಿ ವರುಷಾಂತವೂ ಹೂಗಳರಳುವುವು; ಪಕ್ಷಿಗಳು ಮಧುರವಾಗಿ ರಾಗಾಲಾಪನೆ ಮಾಡುವುವು. ಗಾಳಿ ಪರಿಮಳ ಹೊತ್ತುಕೊಂಡೇ ಬೀಸುತಿತ್ತು. ಚಕ್ರವರ್ತಿ ತನ್ನ ರಾಣಿಗೆ ಯಾವಕೊರತೆಯೂ ಬಾರದಂತೆ ನೋಡುತ್ತಿದ್ದ. ಹಿಟ್ಸೊವಿಗೆ ಸಕಲಸೌಖ್ಯಗಳೂ ಅಲ್ಲಿದ್ದುವು. ಆದರೆ—




# ಚದುರಂಗದಾಟ

ಒಂದಾನೊಂದು ಕಾಲದಲ್ಲಿ ಒಬ್ಬ ಸ್ವಾಮಿಗಳಿದ್ದರು. ಅವರು ಮಹಾ ಪಂಡಿತರೆಂದು ಹೆಸರು ಹೊಂದಿದ್ದರು. ಅವರ ಶಿಷ್ಯವರ್ಗವು ದೇಶದಾದ್ಯಂತ ಹರಡಿತ್ತು. ಅವರೆಲ್ಲಾ ಸ್ವಾಮಿಗಳ ದರ್ಶನಕ್ಕಾಗಿ ತಹತಹ ಪಡುತ್ತಿದ್ದರು.

ಸ್ವಾಮಿಗಳು ಆರು ತಿಂಗಳು ಮಾತ್ರ ತಮ್ಮ ಆಶ್ರಮದಲ್ಲಿದ್ದು ಶಿಷ್ಯರಿಗೆ ವೇದಶಾಸ್ತ್ರಗಳನ್ನು ಬೋಧಿಸುವರು. ಉಳಿದ ಆರು ತಿಂಗಳು ದೇಶಸಂಚಾರ ಮಾಡುವರು. ಹಾಗೆ ಸಂಚರಿಸುವ ಸಮಯದಲ್ಲಿ ಶಿಷ್ಯರು ಭಕ್ತಿಪೂರ್ವಕವಾಗಿ ಸಲ್ಲಿಸುವ ಕಾಣಿಕೆಗಳನ್ನು ಸ್ವೀಕರಿಸಿ, ತೃಪ್ತಿಯಿಂದ ಇರುತ್ತಿದ್ದರು.

ಹೀಗೆ ಸ್ವಾಮಿಗಳು ದೇಶಸಂಚಾರವನ್ನು ಮಾಡುತ್ತಾ ಒಂದು ಹಳ್ಳಿಯಲ್ಲಿದ್ದ ಶಿಷ್ಯರನ್ನು ನೋಡಲು ಹೋಗಬೇಕಾಗಿ ಬಂತು. ಸ್ವಾಮಿ ಇನ್ನಷ್ಟು ದೂರದಲ್ಲಿರುವಾಗಲೇ ಆ ಸುದ್ದಿ ಎಲ್ಲೆಲ್ಲೂ ಹರಡಿತು. ಶಿಷ್ಯವೃಂದವು ಮಂಗಳವಾದ್ಯಗಳೊಂದಿಗೆ ಹೋಗಿ ಸ್ವಾಮಿಗಳನ್ನು ಎದುರುಗೊಂಡು, ತಮ್ಮ ಗ್ರಾಮಕ್ಕೆ ಕರೆದುಕೊಂಡು ಬಂದರು. ಮಹಾವಿಷ್ಣುವಿನ ದೇವಾಲಯದ ಪ್ರಾಂಗಣದಲ್ಲಿರುವ ಒಂದು ಮಂಟಪದಲ್ಲಿ ಅವರಿಗೆ ನಿವಾಸವೇರ್ಪಡಿಸಲಾಯಿತು.

ಆ ಗ್ರಾಮದಲ್ಲಿ ಸ್ವಾಮಿಗಳು ಹೆಜ್ಜೆಯಿಟ್ಟಲಾಗಾಯ್ತು ಅಲ್ಲಿನ ಸಂಭ್ರಮ ಹೇಳಲಸಾಧ್ಯ! ಭಜನೆ, ಹರಿಕಥೆ, ಪುರಾಣಪಠನಗಳಿಂದ ಕಾಲವು ಸದ್ವಿನಿಯೋಗವಾಗುತ್ತಿದ್ದುದರಿಂದ ಗ್ರಾಮಸ್ಥರು ಆನಂದಗೊಂಡು, ತಾವು ಧನ್ಯರಾದೆವೆಂದು ಭಾವಿಸಿದರು. ಅವರಿಗೆಲ್ಲಾ ಮುಕ್ತಿಸಾಧನವನ್ನು ಬೋಧಿಸಿದ ನಂತರ ಸ್ವಾಮಿಗಳು ಮುಂದಿನ ಗ್ರಾಮಕ್ಕೆ ಹೊರಡುವ ಯತ್ನದಲ್ಲಿದ್ದರು.

ಸ್ವಾಮಿಗಳೆಂದಮೇಲೆ ಎಲ್ಲ ಶಿಷ್ಯರನ್ನೂ ಸಂತೋಷಪಡಿಸಬೇಕಾದುದು ಕರ್ತವ್ಯವಷ್ಟೇ? ಹೊರಡಲು ಇನ್ನೊಂದು ಗಂಟೆಯಿದೆ ಎನ್ನುವಾಗ, ಸ್ವಾಮಿಗಳು ತಮ್ಮ ಬಿಡಾರದಲ್ಲಿ ಶತಪಥ ಮಾಡುತ್ತಿದ್ದರು. ಅಕಸ್ಮಾತ್ತಾಗಿ ಅವರಿಗೆ ಬಯಲಿನಲ್ಲಿ ಹುಚ್ಚುಚ್ಚಾರೆ ಚೇಷ್ಟೆಗಳನ್ನು ಮಾಡುತ್ತಿದ್ದ ವ್ಯಕ್ತಿಯೊಬ್ಬ ಕಾಣಿಸಿದ. ಅವರು ಆಚ್ಚರಿಗೊಂಡರು.

ಎನ್. ವೆಂಕಟ್ರಾವು, ಗುರುಪುರ




' ಇವನು ಯಾರಪ್ಪಾ, ಹುಚ್ಚನಲ್ಲಾ ತಾನೆ!' ಎಂದುಕೊಂಡರು ಸ್ವಾಮಿಗಳು ಮನಸ್ಸಿನಲ್ಲೇ. ಆ ಉಡುಪು, ಆ ಠೀವಿಯನ್ನು ನೋಡಿದರೆ ಆತನು ಯಾರೋ ಸಂಪನ್ನ ಗೃಹಸ್ಥನಂತೆ ತೋರುತಿತ್ತು. ಈ ವಿಚಿತ್ರವನ್ನು ತಿಳಿದು ಕೊಳ್ಳುವಸಲುವಾಗಿ ಸ್ವಾಮಿಗಳು ಆತನ ಸನಿಯಕ್ಕೆ ಹೋದರು.

ಆ ಗೃಹಸ್ಥನು ಸ್ವಾಮಿಗಳು ಬಂದಿರುವು ದನ್ನು ಗಮನಿಸಿದಂತೆ ತೋರಲಿಲ್ಲ. ಅವನು ತನಗೆತಾನೇ ಮಾತನಾಡಿಕೊಳ್ಳುತ್ತಾ ಕೈಕಾಲು ಗಳನ್ನು ವಿಚಿತ್ರರೀತಿಯಲ್ಲಿ ಆಡಿಸುತ್ತಿದ್ದ.

"ಅಣ್ಣಾ, ಇದೇನಿದೆಲ್ಲಾ, ನೀನು ಇಲ್ಲಿ ಯಾರೊಂದಿಗೆ ಮಾತನಾಡುತ್ತಿರುವೆ?" ಎಂದು ಪ್ರಶ್ನೆಮಾಡಿದರು ಸ್ವಾಮಿಗಳು.

"ಮಾತಲ್ಲ, ಆಟ, ಆಟ ಆಡುತ್ತಿದ್ದೇನೆ. ನಾನು ಯಾರೊಂದಿಗೆ ಆಟವಾಡುತ್ತಿರು ವೆನೋ ಅವರು ಬಹುಶಃ ನಿಮಗೆ ಕಾಣಿಸು ತ್ತಿಲ್ಲವೆಂದು ವ್ಯಕ್ತವಾಗುವುದು" ಎಂದ ಆ ವಿಚಿತ್ರ ಮನುಷ್ಯ!

ವಿಸ್ಮಯ ಹೊಂದಿದರು ಸ್ವಾಮಿಗಳು. 'ಇವನು ಹುಚ್ಚನೇ?' ಎಂದು ಮತ್ತೊಮ್ಮೆ ಸಂಶಯವಶರಾದರು.

"ಅಣ್ಣಾ ನೀವು ಆಡುತ್ತಿರುವ ಆಟ ಯಾವುದು? ನಿನ್ನೊಂದಿಗೆ ಆಡುತ್ತಿರುವವರು ಯಾರು? ನನಗೆ ಹೇಳಬಹುದೇ?" ಎಂದು ಕೇಳಿದರು ಸ್ವಾಮಿಗಳು.

"ಇರುವ ಗುಟ್ಟೆಲ್ಲಾ ಅಲ್ಲೇ ಇದೆ. ಆದರೂ ಲೋಕಕಲ್ಯಾಣಕ್ಕಾಗಿ ಅವತರಿಸಿದ ಮಹಾನು ಭಾವರು ನೀವು. ನಿಮಗೆ ಹೇಳಲು ಅಭ್ಯಂತರ ವೇನಿದೆ? ನಾನು ಆಡುತ್ತಿರುವುದು ಚದು ರಂಗ. ನನ್ನೊಂದಿಗೆ ಆ ಬದಿಯಲ್ಲಿ ಕುಳಿತು ಆಡುತಿರುವವನು ಆ ದೇವ!" ಎಂದು ತಡ ಬಡಿಸದೆ ಹೇಳಿದ ಆಗಂತುಕ.

ಸ್ವಾಮಿಗಳಿಗೆ ಹೊಟ್ಟೆ ಹುಣ್ಣಾಗುವಷ್ಟು ನಗು ಬಂತು. 'ಇವನು ಯಾರೋ ಹುಚ್ಚನೇ ಸರಿ. ಆದರೆ ಹುಚ್ಚುತನದಲ್ಲೂ ಒಂದು ಬಗೆಯ ತಿಳುವಳಿಕೆ ಕಾಣುತ್ತಿದೆ' ಎಂದುಕೊಂಡರು.

"ಜಯಹಾಗಾದರೆ ಯಾರದು?" ಎಂದು ಕೇಳಿದರು ಸ್ವಾಮಿಗಳು.

"ಇರಿ, ಇರಿ, ಆಟ ಇನ್ನೂ ಪೂರ್ತಿ ಯಾಗ ಲಿಲ್ಲ" ಎಂದು ಹೇಳಿ ಆ ವ್ಯಕ್ತಿ ಮರದ

ಮೇಲಕ್ಕೆ ನೋಡುತ್ತಾ "ನೀವು ಹೇಳಿದ ರಾಜ, ಕಲ್ ಎಂಬ ಮಾತು ಕೇಳಿದೆ. ಇಂದು ನೀವೇ ಜಯಶಾಲಿಗಳಾದಿರಿ" ಎಂದು ಕಿಸೆಗೆ ಕೈಹಾಕಿದ.

ಆತನ ಚರ್ಯೆಯನ್ನು ಕಂಡು ಸ್ವಾಮಿಗಳಿಗೆ ಸೋಜಿಗವಾಯಿತು. "ಹಾಗಾದರೆ ಸೋತವರು ಗೆದ್ದವರಿಗೆ ಕಾಣಿಕೆ ಕೊಡಬೇಕಾಗಿಲ್ಲವೇನು?"

"ಇಲ್ಲವೇ ಮತ್ತೆ. ಒಂದು ಆಟಕ್ಕೆ ಎರಡು ಮೊಹರುಗಳಂತೆ ಪಂದ್ಯ ಕಟ್ಟಿದ್ದೇನೆ."

"ನೀವೀಗ ಸೋತರೂ ಸಹ ಎರಡು ಮೊಹರುಗಳನ್ನು ಸಲ್ಲಿಸಿಲ್ಲ, ಮತ್ತೆ" ಎಂದು ತಮಾಷೆಯಾಗಿ ನುಡಿದರು ಸ್ವಾಮಿಗಳು.

ಕೇಳಿದ್ದೇ ತಡ, ಆತನು ತಟಕ್ಕನೆ ಕಿಸೆಯಿಂದ ಎರಡು ಮೊಹರುಗಳನ್ನು ತೆಗೆದು "ದೇವರು ತಾವು ಗೆದ್ದ ಪಂದ್ಯದ ಹಣವನ್ನು ನನ್ನ ಹತ್ತಿರದಿಂದ ಸ್ವತಃ ಸ್ವೀಕರಿಸುವುದಿಲ್ಲ. ಆ ಸಮಯಕ್ಕೆ ಸರಿಯಾಗಿ ಯಾವ ಪುಣ್ಯಾತ್ಮನ ರೂಪದಲ್ಲೋ ಕಾಣಿಸಿಕೊಳ್ಳುವನು. ಅವರಿಗೆ ಹಣಕೊಟ್ಟರೆ, ಅದು ದೇವರನ್ನು ತಲುಪುವುದೆಂದು ನನ್ನ ಭಾವನೆ. ಇಂದು ಅದೃಷ್ಟವಶಾತ್ ನೀವು ಬಂದಿರಿ. ಆದುದರಿಂದ ದಯವಿಟ್ಟು ಈ ಎರಡು ಮೊಹರುಗಳನ್ನು ತಾವು ಸ್ವೀಕರಿಸಿದರೆ ನನ್ನ ದೇವರಿಗೆ ಮುಟ್ಟುವುದು" ಎಂದು ನುಡಿದು ಪಳಪಳನೆ ಹೊಳೆಯುವ ಆ ಎರಡು ನಾಣ್ಯಗಳನ್ನೂ ಸ್ವಾಮಿಗಳಕೈಯಲ್ಲಿಟ್ಟ.



ತತ್‌ಕ್ಷಣ ಸ್ವಾಮಿಗಳಿಗೆ ಏನು ಮಾಡಲೂ ತೋರಲಿಲ್ಲ. ಕೂಡಲೇ ತಮ್ಮ ಬಿಡಾರಕ್ಕೆ ಹೋಗಿ, ಹುಚ್ಚರಲ್ಲೂ ಎಷ್ಟೋ ಜನ ಭಕ್ತರಿರುವರೆಂದು ಶಿಷ್ಯರಿಗೆ ಹೇಳಿದರು.

ಎರಡು ತಿಂಗಳಾದವು. ಸ್ವಾಮಿಗಳು ದೇಶಸಂಚಾರಮಾಡಿ ಶಿಷ್ಯವರ್ಗದವರಿಗೆ ಮುಕ್ತಿಮಾರ್ಗವನ್ನು ಬೋಧಿಸಿ, ಅವರಿತ್ತ ಕಪ್ಪಕಾಣಿಕೆಗಳನ್ನು ಮೂಟೆಕಟ್ಟಿಕೊಂಡು ಮನೆಯಕಡೆ ನಡೆದರು. ಹಿಂದಿರುಗುವಾಗ ಅವರು ಮತ್ತೆ ಇದೇ ಗ್ರಾಮದಕಡೆ ಬಂದರು.

ಊರಿನಲ್ಲಿ ಇಳಿದ ಕೂಡಲೇ ಸ್ವಾಮಿಗಳಿಗೆ ಹಿಂದಿನ ವಿಚಿತ್ರವ್ಯಕ್ತಿಯ ಜ್ಞಾಪಕವಾಯಿತು. ಅವರು ಆ ಪ್ರದೇಶದಕಡೆ ಹೋಗಿ ನೋಡಲು ಆ ಹುಚ್ಚ ಅದೇಸ್ಥಳದಲ್ಲಿದ್ದಾನೆ. ಕೂಡಲೇ

ಕುತೂಹಲದಿಂದ ಸ್ವಾಮಿಗಳು ಆತನ ಹತ್ತಿರ ಹೋಗಿ "ಇಂದು ಯಾರದು ಗೆಲುವೋ ಅಣ್ಣಾ" ಎಂದು ತಮಾಷೆಯಾಗಿ ಕೇಳಿದರು.

ಆಟದ ನಡುವೆಯಿದ್ದ ಆ ವ್ಯಕ್ತಿ ಹಿಂದಿನಂತೆಯೇ ಮರದ ಮೇಲಕ್ಕೆ ನೋಡಿದ. 'ರಾಜಾ, ಆಟಿಕಟ್' ಎಂದು ಗಟ್ಟಿಯಾಗಿ ಕಿರಿಚಿ, ಪಕಪಕನೆ ನಕ್ಕ.

"ಏನಯ್ಯಾ ತುಂಬಾ ಉಲ್ಲಾಸಗೊಂಡಿರುವಂತೆ ತೋರುವುದು" ಎಂದರು ಸ್ವಾಮಿಗಳು.

"ಗೆದ್ದೆ ಸ್ವಾಮಿ, ಗೆದ್ದೆ. ನಿಮ್ಮ ಆಶೀರ್ವಾದ ಪ್ರಭಾವದಿಂದ. ಈ ಸಾರಿಯ ಪಂದ್ಯವೋ ಅದೂಸಹ ಭಾರೀ ಮಾತಾದ್ದೇ. ನೂರು ಮೊಹರುಗಳು" ಎಂದು ಗಹಗಹಿಸಿ ನಕ್ಕನು.

"ಹಾಗಾದರೆ ದೇವರು ನಿನಗೆ ಹೇಗೆ ಆ ಹಣ ಕೊಡುತ್ತಾನೆ?" ಎಂದು ಕೇಳಿದರು ಸ್ವಾಮಿಗಳು, ಉಕ್ಕಿಬರುವ ತಮ್ಮ ನಗುವನ್ನು ತಡೆದುಕೊಳ್ಳುತ್ತಾ.

"ದೇವರು ನನಗೆ ತಾವಾಗಿ ಬಂದು ಹಣ ಸಲ್ಲಿಸುವುದಿಲ್ಲ. ಆ ಸಮಯಕ್ಕೆ ಯಾರೋ ಒಬ್ಬ ಮಹಾಪುರುಷನ ಅಥವಾ ಪುಣ್ಯಜೀವಿಯ ರೂಪದಲ್ಲಿ ಬಂದು ನನಗೆ ಕೊಡಬೇಕಾದ ಹಣವನ್ನು ಸಲ್ಲಿಸಿ ಹೋಗುವನು. ಇಂದು ಅದೃಷ್ಟವಶಾತ್ ನೀವು ದರ್ಶನ ಕೊಟ್ಟಿರಿ" ಎಂದ ಹುಚ್ಚ.

ಇದನ್ನು ಕೇಳಿ ಸ್ವಾಮಿಗಳು ಬೆರಗಾಗಿ ನೋಡತೊಡಗಿದರು.

ಅದನ್ನು ಕಂಡು ಆ ಹುಚ್ಚನು ಹುಬ್ಬು ಹಾರಿಸುತ್ತಾ "ಏನು ಸ್ವಾಮೀ ಹೀಗೆ ನೋಡುವಿರಿ? ದೇವರು ಸ್ವತಃ ಯಾರಿಗೂ ಕೊಡುವುದಾಗಲೀ ಪಡೆಯುವುದಾಗಲೀ ಇಲ್ಲವೆಂದು ನಿಮಗೆ ತಿಳಿಯದೆ? ಈಗ ತಾವು ನನಗೆ ಹಣ ಕೊಟ್ಟುಬಿಟ್ಟರೆ ದೇವರು ಕೊಡಬೇಕಾದ ಬಾಕಿ ತೀರುತ್ತದೆ" ಎಂದು ಹೇಳುತ್ತಾ ಪಕ್ಕದ ಪೊದೆಯಲ್ಲಿ ಇಟ್ಟಿದ್ದ ಕೋಲೊಂದನ್ನು ಹೊರಕ್ಕೆ ತೆಗೆದ.

ಸ್ವಾಮಿಗಳು ಚೆಕ್ಕಸಬೆರಗಾಗಿ ತಮ್ಮ ಸಂಚಾರದಲ್ಲಿ ಶಿಷ್ಯವರ್ಗದವರು ತಮಗರ್ಪಿಸಿದ್ದ ಹಣವನ್ನೆಲ್ಲಾ ಆ ಹುಚ್ಚನ ಕೈಗೆ ಕೊಟ್ಟು ಬರಿಗೈಯಲ್ಲಿ ಆಶ್ರಮಕ್ಕೆ ಹಿಂತಿರುಗಿದರು. ಎಂದೂ ಮರೆಯದಂತಾಯಿತು ಸ್ವಾಮಿಗಳಿಗೆ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಜೂಲೈ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಮೇ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು–26.

---

ಹೊಸ ಸೂಚನೆ: ಈ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತಾಂವಶನ್ನು ಇದುವರೆಗೆ ನಾವು ಒಂದು ತಿಂಗಳು ಮುಂದಾಗಿ ಪ್ರಕಟಿಸುತ್ತ ಬಂದಿದ್ದೆವಷ್ಟೆ? ಇನ್ನು ಈ ತಿಂಗಳಿನಿಂದ ನಮ್ಮ ಪ್ರಿಯ ಓದುಗರ ಸೌಕರ್ಯಕ್ಕಾಗಿ ಈ ಕ್ರಮದಲ್ಲಿತುಸು ಬದಲಾವಣೆ ಮಾಡಲಾಗಿದೆ. ಈಗ ಜೂನ್ ತಿಂಗಳ ಸ್ಪರ್ಧೆಯ ಫಲಿತಾಂಶವನ್ನು ಅದೇ ತಿಂಗಳ 'ಚಂದಮಾಮ'ನಲ್ಲಿ, ಗೆದ್ದವರ ಹೆಸರಿನೊಂದಿಗೆ ಒಂದೇಬಾರಿ ಪ್ರಕಟಿಸುತ್ತೇವೆ. ಬಹುಮತಿ ರೂ. 10/–ನ್ನು ಯಥಾಪ್ರಕಾರ ಜೂನ್ ಸಂಚಿಕೆ ಹೊರಟನಂತರ ಕಳುಹಿಸಲ್ಪಡುತ್ತದೆ.

## ಬಿಟ್ಟೆಲ್ಲಿ ತುಂಬಿರಿ

೧. ಮಾವಿನ ಹಣ್ಣನು ತಿಂದರೆ.... ಗೊರಟು
೨. ಗೊರಟನು ಹುಗಿದರೆ.... ಚಿಗುರು
೩. ಚಿಗುರು ಬೆಳೆದಾಗ.... ಗಿಡ
೪. ಗಿಡ ಬೆಳೆದರೆ ಕಾ.... ಮರ
೫. ಮರ ಬೆಳೆದರೆ ಶೋ.... ಹೂವು
೬. ಹೂಗಳು ಹೋದರೆ ಹು.... ಮಿಡಿ
೭. ಮಿಡಿ ಬೆಳೆದಾಗ.... ಕಾಯಿ
೮. ಕಾಯಿ ಬಲಿತಾಗ.... ಹಣ್ಣು
೯. ಹಣ್ಣಿನ ಒಳಗೆ.... ಗೊರಟು

ವಿ. ಎಸ್. ಸಿದ್ದಾಪುರ

೧-ಹುಗಿಯಿರಿ ೪-ಊವುದು ೭-ಮಾವಿನ
೨-ಬರುವುದು ೫-ಭಿಸುವುದು ೮-ಮಾಗಿದ
೩-ವುದೊಂದು ೬-ಟ್ಟುವುದು ೯-ಮೊದಲಿನ

## ಒಗಟು

೧. ಮುಳ್ಳುಂಟು ಗಿಡವಲ್ಲ, ನಾಲಗೆಯುಂಟು ಪ್ರಾಣಿಯಲ್ಲ, ಟೋಪಿಯುಂಟು ತಲೆಯಿಲ್ಲ, ಓಡಾಡುವುದು ಕಾಲಿಲ್ಲ, ಓಡಿದಲ್ಲೆಲ್ಲಾ ವಾಂತಿ!—ಏನಿದು?
೨. ಒಂದೇ ದೇಹ ನೂರಾರು ಕಾಲು, ಕುಣಿಕೆ ಇದರದು ತಲೆಗಳ ಮೇಲು, ಇದು ಏನೋ ಹೇಳು?— ಕೆ. ಯಂ. ಅನಂತಯ್ಯ
೩. ಕಾಣದ ಕೆರೆ ತುಂಬಿದೆ, ಸುಣ್ಣವಿಲ್ಲದ ಗೋಡೆ ಬೆಳ್ಳಗಿದೆ. ಏನು?
೪. ಎಲ್ಲೋ ಹುಟ್ಟಿ, ಎಲ್ಲೋ ಬೆಳೆದು ಮನೆಗೆ ಬಂದು ಮೂಲೇಲಿದ್ದು ಮನೆ ಪೂರಾನೆಕ್ಕಿ ನೆಕ್ಕಿ ಹೋಗುತ್ತೆ—ಏನು?

ಆರ್. ಸಿದ್ದಜಂಗಪ್ಪ

೧-ಪೌಂಟೆನ್ ಪೆನ್ ೨-ಬಾಚಣಿಗೆ
೩-ತೆಂಗಿನಕಾಯಿ ೪-ಕಸಪರಿಕೆ.

## ನಗೆ ಹನಿ

ಮಗಳು:—ಅಪ್ಪಾ, ಹಟ ಮಾಡಬಾರದಂತ ಬುದ್ಧಿ ಹೇಳ್ತೀರಲ್ಲಾ? ನೀವು ಹಟ ಮಾಡಿಯೇ ನನ್ನಮ್ಮನ್ನ ಮದುವೇ ಮಾಡಿಕೊಂಡದ್ದಂತೆ?
ತಂದೆ:—ಹೌದು. ಅದರಿಂದಲೇ ಹಟಮಾಡುವುದು ತಪ್ಪು ಅಂತ ನನಗೆ ಅನುಭವಾಯ್ತು.

* * *

ಉಪಾಧ್ಯಾಯ: ಮೊದಲನೇ ಮಹಾಯುದ್ಧ ಯಾವಾಗ ನಡೆಯಿತು?
ಹುಡುಗ:—ಮೊನ್ನೆ ಮಧ್ಯಾಹ್ನದ ಎರಡನೇ ಪೀರಿಯಡಿನಲ್ಲಿ ಸಾರ್.

* * *

"ಅಯ್ಯೋ! ಭಯಂಕರವಾದ ಅಪಘಾತ! ನಾನ್ನೂರು, ಐನೂರು ಪ್ರಾಣಹಾನಿ!"
"ಎಲ್ಲಿ?"
"ಇಲ್ಲೇ, ನನ್ನ ಕಾಲಿನಡೀಲಿ ನೋಡು ಇರುವೆಗಳು!

* * *

ಅಪ್ಪ:—ಕೊಂಬಿರುವ ಒಂದು ಪ್ರಾಣಿಯ ಹೆಸರನ್ನು ಬರಿ ನೋಡುವಾ.
ಮಗ:—ಕುದುರೆ (ಬರೆಯುವನು)
ಅಪ್ಪ:—ಕುದುರೆಗೆ ಕೊಂಬೆಲ್ಲ್ಯೋ
ಮಗ:-ಎರಡು ಕೊಂಬಿದೆ ಅಪ್ಪಾ, ಕ,ಕ್ಕೊಂದು ದ,ಕ್ಕೊಂದು.

ಡಿ. ಪಿ. ಶ್ರೀನಿವಾಸ, ಬೆಂಗಳೂರು

* * *

ಗಂಡ:—ಇನ್ನೂ ದೀಪ ಹಚ್ಚಿಲ್ಲವೇಕೆ?
ಹೆಂಡತಿ:—ಬೆಂಕಿ ಪೆಟ್ಟಿಗೆ ಹುಡುಕ್ತಾ ಇದ್ದೇನೆ ಸಿಕ್ಕಿಲ್ಲ.
ಗಂಡ:-ಕತ್ಲೇಲಿ ಹುಡುಕಿದ್ರೆ ಸಿಕ್ಕೀತೆ? ದೀಪ ಹಚ್ಚಿ ಹುಡುಕು.

ಪಿ. ವಿ. ಶಾರದ, ಮೈಸೂರು

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26, Controlling Editor : 'SRI CHAKRAPANI'

Photo by J. V. S. Sastry



ಬಹುಮಾನ
ಪಡೆದ ಶೀರ್ಷಿಕೆ

ಮೌನ ಭೇದಕ

ಕಳಿಸಿದವರು:
ಆಂಡಾಳ್, ಮೈಸೂರು

